ಉಪನ್ಯಾಸ ಗ್ರಂಥಮಾಲೆ

೬೧

# ಗ್ರಾಮಾಭ್ಯುದಯದ ಯೋಜನಾಂಗಗಳು

ಡಾ॥ ಟಿ. ಕೆ. ಮೇಟಿ

ಎಂ. ಎ., ಪಿಎಚ್. ಡಿ. (ಬಾಂಬೆ), ಪಿ. ಜಿ. ಡಿ. (ದ ಹೇಗ)




ಕರ್ನಾಟಕ ವಿಶ್ವವಿದ್ಯಾಲಯ

ಧಾರವಾಡ

೧೯೬೨

# ಉಪನ್ಯಾಸ ಗ್ರಂಥಮಾಲೆ

( ಬೆಲೆ: ಪ್ರತಿ ಒಂದಕ್ಕೆ ೨೫ ಪೈಸೆ )

೧. ಭವಭೂತಿ (ಎರಡನೆಯ ಆವೃತ್ತಿ) ಕೆ. ಕೃಷ್ಣಮೂರ್ತಿ
೨. ಮನೋರೋಗಗಳು ( ,, ) ಎನ್. ಆರ್. ಕುಲಕರ್ಣಿ
೩. ಪ್ರಥಮ ಪಂಚವಾರ್ಷಿಕ ಯೋಜನೆ
ಹಾಗೂ ಒಕ್ಕಲತನ ಎನ್. ಪಿ. ಪಾಟೀಲ
೪. ಗಾದೆಗಳು (ಮೂರನೆಯ ಆವೃತ್ತಿ) ಎ. ಕೆ. ರಾಮಾನುಜನ್
೫. ಭಾರತದಲ್ಲಿ ಜಾತಿಪದ್ಧತಿ (ಎ. ಆ.) ವ್ಹಿಕ್ಟರ್ ಎಸ್. ಡಿಸೋಜಾ
೬. ಕೀಟಕ ಪಿಡುಗುಗಳ ಸಮೀಕ್ಷಣೆ (ದ್ವಿ.ಆ.)
ಎಸ್. ಎಸ್. ಕಟಗಿಹಳ್ಳಿಮಠ
೭. ರಾಜಕೀಯ ಪಕ್ಷಗಳು (ಎರಡನೆಯ ಆವೃತ್ತಿ)
ಎನ್. ರಾಜಗೋಪಾಲರಾವ್
೮. ಸ್ವಾದಿ ಅರಸುಮನೆತನ (ಎ. ಆ.) ಎಸ್. ಎಸ್. ಮಾಳವಾಡ
೯. ಮಕ್ಕಳ ಶಿಕ್ಷಣ (ಮೂರನೆಯ ಆವೃತ್ತಿ) ಡಿ. ಎಸ್. ಕರ್ಕಿ
೧೦. ಮೂಢನಂಬಿಕೆಗಳು (ಮೂರನೆಯ ಆವೃತ್ತಿ)
ಎಲ್. ಆರ್. ಹೆಗಡೆ
೧೧. ಸಂಸ್ಕೃತ ಕವಯಿತ್ರಿಯರು (ಎ. ಆ.) ಕೆ. ಟಿ. ಪಾಂಡುರಂಗಿ
೧೨. ನಿತ್ಯಜೀವನದಲ್ಲಿ
ರಸಾಯನಶಾಸ್ತ್ರ ( ,, ) ಬಿ. ವಿರೂಪಾಕ್ಷಪ್ಪ
೧೩. ಸಾರ್ವಜನಿಕ ಆಡಳಿತ ( ,, ) ಜಿ. ಎಸ್. ಹಾಲಪ್ಪ
೧೪. ವಿಚಾರವಾದ (ಎರಡನೆಯ ಆವೃತ್ತಿ) ಗೌರೀಶ ಕಾಯ್ಕಿಣಿ
೧೫. ಮಹಾಕವಿ ಮಿಲ್ಟನ್ ( ,, ) ಜಿ. ಎಸ್. ಆಮೂರ
೧೬. ಭಾರತದಲ್ಲಿ ಗ್ರಂಥಾಲಯ ಪ್ರಸಾರ ಕೆ. ಎಸ್. ದೇಶಪಾಂಡೆ
೧೭. ಭಾರತೀಯ ನಾಗರಿಕತೆಗೆ
ಮನುವಿನ ಕೊಡುಗೆ (ಎ. ಆ.) ಬಿ. ಎಚ್. ಶ್ರೀಧರ
೧೮. ಜನಸಂಖ್ಯೆ ಹಾಗು ಆಹಾರ ಸಮಸ್ಯೆ
ಪಿ. ಎಂ. ಉಮಾಕಾಂತ ಶಾಸ್ತ್ರಿ
೧೯. ಸೌರವ್ಯೂಹ ಸಿ. ಎನ್. ಶ್ರೀನಿವಾಸ ಅಯ್ಯಂಗಾರ
೨೦. ಪ್ರಾಚೀನ ಭಾರತದಲ್ಲಿ
ಸಾಮಾಜಿಕ ಜನಜೀವನ ಸಿ. ವ್ಹಿ. ರಂಗಸ್ವಾಮಿ

# ಗ್ರಾಮಾಭ್ಯುದಯದ
# ಯೋಜನಾಂಗಗಳು

ಉಪನ್ಯಾಸ ಗ್ರಂಥಮಾಲೆ

೬೧

# ಗ್ರಾಮಾಭ್ಯುದಯದ ಯೋಜನಾಂಗಗಳು


ಡಾ|| ಟಿ. ಕೆ. ಮೇಟಿ

ಎಂ. ಎ., ಪಿ. ಎಚ್. ಡಿ. (ಬಾಂಬೆ , ಪಿ. ಜಿ. ಡಿ. (ದ ಹೇಗ)








ಕರ್ನಾಟಕ ವಿಶ್ವವಿದ್ಯಾಲಯ

ಧಾರವಾಡ

೧೯೬೭

ಪ್ರಕಾಶಕರು :

ಎಸ್. ಎಸ್. ಒಡೆಯರ, ಎಂ. ಎ., ಎಲ್‌ಎಲ್. ಬಿ.,
ರಜಿಸ್ಟ್ರಾರ,
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಪ್ರಥಮ ಮುದ್ರಣ, ೨,೦೦೦ ಪ್ರತಿಗಳು
ಮೇ, ೧೯೬೭



ಬೆಲೆ : ೨೫ ಪೈಸೆ

ಮುದ್ರಕರು :

ಎಮ್. ಜಿ. ಪಾಲೇಕರ
ವಸಂತ ಮುದ್ರಣಾಲಯ,
ಧಾರವಾಡ-೧.

# ಮಾಲೆಯ ಮುನ್ನುಡಿ

ಕರ್ನಾಟಕ ವಿಶ್ವವಿದ್ಯಾಲಯವು ತನ್ನ ವ್ಯಾಸಂಗವಿಸ್ತರಣ ಹಾಗೂ ಪ್ರಕಟನ ಶಾಖೆಗಳ ಮುಖಾಂತರ ಕೈಕೊಂಡು ನಡೆಸುತ್ತಿರುವ ಜ್ಞಾನಪ್ರಸಾರದ ಯೋಜನೆಗಳಲ್ಲಿ ಈ 'ಉಪ-ನ್ಯಾಸ ಗ್ರಂಥಮಾಲೆ' ಅತ್ಯಂತ ಮುಖ್ಯವೂ, ಜನಪ್ರಿಯವೂ ಆಗಿರುವದು ಹೆಮ್ಮೆಯ ಮಾತಾಗಿದೆ. ವಿಶ್ವವಿದ್ಯಾಲಯದ ಆಡಳಿತ ಕ್ಷೇತ್ರದಲ್ಲಿರುವ ಎಂಟು ಜಿಲ್ಲೆಗಳಲ್ಲಿಯೂ ಉಪನ್ಯಾಸ ಶಿಬಿರಗಳನ್ನು ಏರ್ಪಡಿಸಲಾಗುತ್ತಿದ್ದು, ವಿಶ್ವವಿದ್ಯಾಲಯದ ಮತ್ತು ಅದಕ್ಕೆ ಸೇರಿದ ಕಾಲೇಜುಗಳ ಪ್ರಾಧ್ಯಾಪಕರು ಸಾಹಿತ್ಯ, ವಿಜ್ಞಾನ, ಸಾಮಾಜಿಕಶಾಸ್ತ್ರ ಮೊದಲಾದ ಶಾಖೆಗಳಿಗೆ ಸಂಬಂಧಪಟ್ಟ ವಿಷಯಗಳನ್ನು ಆಯ್ದು ಕೊಂಡು, ಶಾಸ್ತ್ರಸಮ್ಮತವಾದ ಸರಣಿಯಲ್ಲಿ, ಜನಸಾಮಾನ್ಯಕ್ಕೆ ತಿಳಿಯುವ ಶೈಲಿಯಲ್ಲಿ ಈ ಶಿಬಿರಗಳಲ್ಲಿ ಉಪನ್ಯಾಸಗಳನ್ನು ಕೊಡುತ್ತಾರೆ. ವಿಶ್ವವಿದ್ಯಾಲಯದ ಜ್ಞಾನಭಂಡಾರದ ಅಲ್ಪಾಂಶವನ್ನಾದರೂ ಮಹಾಜನರ ಮನೆಬಾಗಿಲಿಗೆ ಒಯ್ದು ಮುಟ್ಟಿಸ

ಬೇಕೆಂದು ಮಾಡಿದ ಈ ಪ್ರಯತ್ನಕ್ಕೆ ನಮ್ಮ ನಿರೀಕ್ಷೆಗೆ ಮೀರಿದ ಮೆಚ್ಚಿಕೆಯೂ ಪ್ರೋತ್ಸಾಹವೂ ದೊರೆಯುತ್ತಿವೆ. ಜನರು ತಾವಾಗಿಯೇ ಮುಂದೆ ಬಂದು ತಮ್ಮ ತಮ್ಮ ಊರುಗಳಲ್ಲಿ ಈ ಉಪನ್ಯಾಸಮಾಲೆಗಳನ್ನು ಏರ್ಪಡಿಸಲು ವಿಶ್ವವಿದ್ಯಾಲಯಕ್ಕೆ ಬರೆದು ಬಿನ್ನವಿಸಿಕೊಳ್ಳುತ್ತಿರುವದು ನಿಜವಾಗಿಯೂ ಸಂತೋಷದ ಸಂಗತಿಯಾಗಿದೆ.

ಉಪನ್ಯಾಸಗಳನ್ನು ಕೊಡಿಸಿದಷ್ಟಕ್ಕೆ ತೃಪ್ತಿಗೊಳ್ಳದೆ, ಇವುಗಳಲ್ಲಿ ಕೆಲವನ್ನಾದರೂ ಗ್ರಂಥರೂಪದಲ್ಲಿ ಬರೆಯಿಸಿ, ಸುಲಭವಾದ ಬೆಲೆಗೆ ಪ್ರಕಟಿಸಿ ಕನ್ನಡ ಜನದಲ್ಲೆಲ್ಲ ಹರಡಬೇಕೆಂಬ ಯೋಜನೆ ಈಗ ಹತ್ತು ವರ್ಷಗಳ ಪೂರ್ವದಲ್ಲಿಯೇ ಈ 'ಉಪನ್ಯಾಸ ಗ್ರಂಥಮಾಲೆ'ಯ ರೂಪದಲ್ಲಿ ಮೂರ್ತಗೊಂಡು ಮುನ್ನಡೆದಿದೆ. ಈ ಮಾಲೆಯಲ್ಲಿ ಇದುವರೆಗೆ ಬೇರೆ ಬೇರೆ ವಿಷಯಗಳನ್ನು ಕುರಿತು ೬೦ ಪುಸ್ತಕಗಳು ಪ್ರಕಟವಾಗಿವೆ. ಅಲ್ಪಾವಧಿಯಲ್ಲಿಯೇ ಈ ಪುಸ್ತಕಗಳ ಸಾವಿರಾರು ಪ್ರತಿಗಳು ಮಾರಾಟಗೊಂಡಿವೆ. ಕೆಲವು ಪುಸ್ತಕಗಳು ಮೂರನೆಯ ಆವೃತ್ತಿಯನ್ನೂ ಕಾಣುತ್ತಿರುವುದು ಮಾಲೆಯ ಉಪಯುಕ್ತ-ತೆಗೂ, ಜನಪ್ರಿಯತೆಗೂ ಸಾಕ್ಷಿಯಾಗಿದೆ.

ನಮ್ಮ ಪ್ರಾರ್ಥನೆಗೆ ಮನ್ನಣೆಕೊಟ್ಟು, ಉಪನ್ಯಾಸಕರು ಪುಸ್ತಕಗಳನ್ನು ಬರೆದುಕೊಡುತ್ತಿರುವದು ಶ್ಲಾಘ್ಯವಾದ ವಿಷಯ. ಇದಕ್ಕಾಗಿ ಈ ಲೇಖಕ ಮಹಾಶಯರಿಗೆ ವಿಶ್ವವಿದ್ಯಾ-ಲಯದ ವಂದನೆಗಳನ್ನು ಸಂತೋಷದಿಂದ ಸಲ್ಲಿಸುತ್ತೇನೆ. ವಿಶ್ವವಿದ್ಯಾಲಯ ಧನಸಹಾಯ ಆಯೋಗದವರು ನಮ್ಮ ಈ ಯೋಜನೆಯನ್ನು ಮೆಚ್ಚಿಕೊಂಡು ಉಪನ್ಯಾಸ ಶಿಬಿರಗಳಿಗೂ,

ಈ ಪುಸ್ತಿಕೆಗಳ ಪ್ರಕಟನೆಗೂ ಧನಸಹಾಯವೀಯುತ್ತಿದ್ದ ಅವರಿಗೆ ವಿಶ್ವವಿದ್ಯಾಲಯವು ತನ್ನ ಕೃತಜ್ಞತೆಗಳನ್ನು ಸೂಚಿಸುತ್ತದೆ.

ಈ ಕಿರುಹೊತ್ತಿಗೆಗಳ ಪ್ರಸಾರ ನೂರ್ಮಡಿಗೊಂಡು ತನ್ಮೂಲಕ ನಮ್ಮ ಜನತೆಯ ಜ್ಞಾನಾಸಕ್ತಿ ಪುಷ್ಟಿಗೊಳ್ಳಲೆಂದು ಹಾರೈಸುತ್ತೇನೆ.

ಡಿ. ಸಿ. ಪಾವಟೆ
ಉಪಕುಲಪತಿ
ಕರ್ನಾಟಕ ವಿಶ್ವವಿದ್ಯಾಲಯ

ಧಾರವಾಡ
೨೬—೫—೧೯೬೭

# ಪ್ರಸ್ತಾವನೆ

ಅಂತಃಕಲಹಗಳ ಲಾಭ ಪಡೆದು ನೂರಾರು ವರ್ಷಗಳ ವರೆಗೆ ಅಧಿಕಾರಾರೂಢವಾದ ಬ್ರಿಟಿಶರ ಆಳಿಕೆಯ ವಿಶಿಷ್ಟ ರಾಜಕೀಯ ಮತ್ತು ಆರ್ಥಿಕ ಪದ್ಧತಿಯಿಂದ ಭಾರತದ ಗ್ರಾಮೀಣ ಜೀವನ ಕಲುಷಿತವಾಯಿತು ಮತ್ತು ಕಂಗಾಲಾಯಿತು. ಗ್ರಾಮಗಳಲ್ಲಿ ಪರಸ್ಪರ ವಿಶ್ವಾಸ ಮತ್ತು ಪ್ರೇಮಾದರಗಳು ಮಾಯವಾದವು. ಮುಲತಾಯಿ ಸ್ವಭಾವದ ಆರ್ಥಿಕ ಪದ್ಧತಿಯಿಂದ ಹಳ್ಳಿಗಳಲ್ಲಿಯ ಸ್ವಾವಲಂಬನವು ಮರೆಯಾಯಿತು. ಸ್ವಾತಂತ್ರ್ಯಪೂರ್ವದಲ್ಲಿ ಭಾರತದಲ್ಲಿಯ ಗ್ರಾಮಗಳು ಬಲು ಹೀನ ಸ್ಥಿತಿಯಲ್ಲಿದ್ದವೆನ್ನಬಹುದು.

ಮಹಾತ್ಮಾ ಗಾಂಧಿಯವರು, ರವೀಂದ್ರನಾಥ ಠಾಕೂರ ಮುಂತಾದವರು ಹಳ್ಳಿಗಳನ್ನು ಸುಧಾರಿಸಲು ಪ್ರಯತ್ನಿಸಿದರು. ಸರ್ವೋದಯ ಕೆಲಸಗಳೂ ನಡೆದವು. ಇವೆಲ್ಲ ಪ್ರಯತ್ನಗಳು ಅಷ್ಟು ಫಲಕಾರಿಯಾಗಲಿಲ್ಲವಲ್ಲದೆ ಅವು ಇಡೀ ದೇಶವನ್ನು ವ್ಯಾಪಿಸಿದ್ದಿಲ್ಲವೆನ್ನಬಹುದು. ಅಂತೂ ಸ್ವಾತಂತ್ರ್ಯ ಪಡೆದ ನಂತರ ನಮ್ಮ ಸರಕಾರವು ರಾಷ್ಟ್ರೀಯ ಯೋಜನೆಗಳ ಮುಖಾಂತರ ಗ್ರಾಮಾಭ್ಯುದಯಕ್ಕಾಗಿ ಅನೇಕ ಯೋಜನಾಂಗಗಳನ್ನು ರಚಿಸಿ ಅವೆಲ್ಲವುಗಳನ್ನು ಒಟ್ಟುಗೂಡಿಸಿದೆ.

ಅವುಗಳಲ್ಲಿ ಸಹಕಾರ, ಗ್ರಾಮಪಂಚಾಯತಿ ಮತ್ತು ಸಮಾಜ ವಿಕಾಸ ಯೋಜನೆಗಳು ಮಹತ್ವವಾದವುಗಳು ಮತ್ತು ಇಡೀ ರಾಷ್ಟ್ರವನ್ನೇ ವ್ಯಾಪಿಸಿಕೊಂಡಂಥವು.

ಯೋಜನಾಂಗಗಳು ಮತ್ತು ಗ್ರಾಮೀಣ ಸಮಾಜ ಈ ಎರಡು ಘಟಕಗಳ ಮಧ್ಯೆ ಹೆಚ್ಚು ಅಂತರ ಉಳಿಯದಂತೆ ನೋಡಿಕೊಳ್ಳುವದು ಪ್ರತಿಯೊಬ್ಬ ಭಾರತೀಯನ ಕರ್ತವ್ಯವಾಗಿದೆ. ಇದಕ್ಕಾಗಿ ಸರಕಾರ, ಸಂಘ-ಸಂಸ್ಥೆ ಮತ್ತು ಸಂಬಂಧಿಸಿದ ಜನರು ಅವಿಶ್ರಾಂತ ಹೆಣಗಬೇಕಾಗಿದೆ. ಆಚಾರ ವಿಚಾರಗಳಲ್ಲಿ ತಾಕಲಾಟವಾಗದಂತೆ ತಾಳ್ಮೆ ಮತ್ತು ಸ್ವಲ್ಪ ಸ್ವಾರ್ಥತ್ಯಾಗದಿಂದ ಕಾರ್ಯಶೀಲರಾದರೆ ಭಾರತದ ಹಳ್ಳಿಗಳು ಅಭಿವೃದ್ಧಿಯ ದಿಶೆಯಲ್ಲಿ ಸಾಗುವದರಲ್ಲಿ ಸಂದೇಹವಿಲ್ಲ.

ಪ್ರಜಾಸತ್ತೆಯಲ್ಲಿ ನಮ್ಮನ್ನು ನಾವೇ ಆಳಬೇಕು ಮತ್ತು ನಾವೇ ಅಭಿವೃದ್ಧಿಯನ್ನು ಹೊಂದಬೇಕು. ಇಂಥ ವಾತಾವರಣದಲ್ಲಿ ಕಲಕು ಮಾಡುವ 'ಕೊಂಡಿಮಂಚಣ್ಣ'ನ ಪದ್ಧತಿಯನ್ನು ಬಿಟ್ಟು ಎಲ್ಲರೂ ಅಭಿವೃದ್ಧಿಯತ್ತ ಲಕ್ಷ್ಯಗೊಡಬೇಕು. ಕಲ್ಯಾಣಕಾರಿಯಾದ ಸರಕಾರವು ಹಳ್ಳಿಯ ಜೀವನೋದ್ಧಾರಕ್ಕೆ ಅನುಕೂಲವಾಗುವಂತೆ ಆರ್ಥಿಕ ಧೋರಣೆಯನ್ನು ತಾಳಿದೆ. ಇದಕ್ಕೆ ಪುಷ್ಟಿ ಕೊಡುವಂತೆ ಜನರ ಸಹಕಾರ ಮತ್ತು ಕಾರ್ಯತತ್ಪರತೆ ಅವಶ್ಯವಾಗಿದೆ. ಈ ಎಲ್ಲ ಧ್ಯೇಯಗಳು ಸಹಕಾರ, ಪಂಚಾಯತಿ ರಾಜ್ಯ ಮತ್ತು ಸಮಾಜಾಭಿವೃದ್ಧಿ ಕಾರ್ಯಕ್ರಮಗಳಿಂದ ಸಾಧ್ಯ ಎಂದು ಎತ್ತಿ ತೋರಿಸಲು ಈ ಪುಸ್ತಕದಲ್ಲಿ ಪ್ರಯತ್ನ ಮಾಡಲಾಗಿದೆ.

ಈ ಕಿರುಹೊತ್ತಿಗೆಯು ಕನ್ನಡದಲ್ಲಿ ನನ್ನ ಮೊದಲನೆಯ ಸಾಧನೆಯು. ಭಾಷೆ ಅಷ್ಟು ಸಮರ್ಪಕವಾಗಿರಲಿಕ್ಕಿಲ್ಲ ಮತ್ತು ಸರಿಯಾದ ಶಬ್ದಗಳು ಹೊಂದಿರಲಿಕ್ಕಿಲ್ಲ. ಕ್ಷಮಿಸಬೇಕು. ಸಹಕಾರ, ಪಂಚಾಯತಿರಾಜ್ಯ ಮತ್ತು ಸಮಾಜಾಭಿವೃದ್ಧಿ ಕ್ಷೇತ್ರಗಳಲ್ಲಿ ನುರಿತ ಅಧಿಕಾರಿಗಳು ಮತ್ತು ಸಮಾಜ ಕಾರ್ಯ ಕರ್ತರು ಈ ಕೃತಿಯ ಬಗ್ಗೆ ಏನಾದರೂ ಸೂಚನೆ ಮಾಡಿದರೆ ಮುಂದಿನ ಆವೃತ್ತಿಯಲ್ಲಿ ತಿದ್ದುಪಡೆ ಮಾಡಲಾಗುವದು. ಚಿಕ್ಕುಂಬಿಯಲ್ಲಿ ನಡೆದ ಉಪನ್ಯಾಸಶಿಬಿರದಲ್ಲಿ ಈ ವಿಷಯದ ಬಗ್ಗೆ ಉಪನ್ಯಾಸವೀಯಲು ಅವಕಾಶ ಒದಗಿಸಿಕೊಟ್ಟು ಅದನ್ನು ಪುಸ್ತಕರೂಪದಲ್ಲಿ ಪ್ರಕಟಿಸುತ್ತಿರುವ ಕರ್ನಾಟಕ ವಿಶ್ವವಿದ್ಯಾ-ಲಯದ ಅಧಿಕಾರಿಗಳಿಗೆ ನನ್ನ ಕೃತಜ್ಞತೆಗಳು.

ಧಾರವಾಡ
೧-೫-೧೯೬೭

**ಟಿ. ಕೆ. ಮೋಟಿ**

# ಪರಿವಿಡಿ



---

# ಗ್ರಾಮಾಭ್ಯುದಯದ ಯೋಜನಾಂಗಗಳು

## ೧. ಪೀಠಿಕೆ

ಯೋಜನೆಯ ಪೂರ್ವದಲ್ಲಿ (Pre-plan period) ಬೇರೆ ಬೇರೆಯಾಗಿ ಕಾರ್ಯವಹಿಸುತ್ತಿದ್ದ ಸಂಘ-ಸಂಸ್ಥೆಗಳು ಯೋಜನೆಗಳಲ್ಲಿ (Plans) ಕ್ರಮೇಣವಾಗಿ ಪರಸ್ಪರ ಹೊಂದಾಣಿಕೆ (Co-ordinated) ಮಾಡಲ್ಪಟ್ಟವು ಮತ್ತು ಅಭಿವೃದ್ಧಿಯ ಆವಶ್ಯಕ ಅಂಗಗಳಾಗಿ ಪರಿವರ್ತಿಸಲ್ಪಟ್ಟವು. ಉದಾಹರಣಾರ್ಥವಾಗಿ, ಸಹಕಾರಿ ಸಂಘಗಳು ಯೋಜನೆಯ ಪೂರ್ವದಲ್ಲಿ ಪ್ರತ್ಯೇಕ ಅಸ್ತಿತ್ವವುಳ್ಳವುಗಳಾಗಿದ್ದವು. ಮೊದಲನೇ ಪಂಚವಾರ್ಷಿಕ ಯೋಜನೆಯಲ್ಲಿಯೂ ಸಹ ಅವುಗಳ ನಿರ್ದಿಷ್ಟ ಪರಿಮಿತಿ ಗೊತ್ತುಪಡಿಸಲಿಲ್ಲ. ಎರಡನೇ ಪಂಚವಾರ್ಷಿಕ ಯೋಜನೆಯಲ್ಲಿ ಅವುಗಳಿಗೆ ಸುಸ್ಥಿರ ನಿಲುವೊ ಬಂದಿತಲ್ಲದೆ ಅವುಗಳ ವ್ಯಾಪಕತೆ ಬೆಳೆಯಿತು. ಮುಂದೆ ಮೂರನೇ ಯೋಜನೆಯಲ್ಲಿ ಕಾರ್ಯವ್ಯಾಪ್ತಿ ಬಹುಮುಖವಾಗಿ ಬೆಳೆಯಿತು ಮತ್ತು ಅವುಗಳನ್ನು ಸಮಾಜ ಅಭಿವೃದ್ಧಿಯ

ಮುಖ್ಯ ಅಂಗಗಳೆಂದು ಸ್ವೀಕರಿಸಲಾಯಿತು. ಇದರಂತೆ, ಗ್ರಾಮಪಂಚಾಯತಿಗಳು ಯೋಜನೆಯ ಪೂರ್ವದಲ್ಲಿ ಇದ್ದರೂ ಅವುಗಳಿಗೆ ಮೊದಲನೆಯ ಮತ್ತು ಎರಡನೆಯ ಪಂಚವಾರ್ಷಿಕ ಯೋಜನೆಯಲ್ಲಿ ಬಲುಗಾತ್ರದ ಹೊಣೆಗಾರಿಕೆ ಇದ್ದಂತೆ ಕಂಡು ಬರಲಿಲ್ಲ. ಮೂರನೆಯ ಪಂಚವಾರ್ಷಿಕ ಯೋಜನೆಯಲ್ಲಿ ಅವುಗಳ ಕಾರ್ಯಕ್ಷೇತ್ರ ವಿಸ್ತಾರವಾಯಿತಲ್ಲದೆ, ಅವು ಪ್ರಜಾಸತ್ತಾತ್ಮಕ ಆಡಳಿತದ ಮತ್ತು ಅಭಿವೃದ್ಧಿಯ ಮೂಲ ಬೇರುಗಳಾದವು. ಈ ಪಂಚಾಯತಿಗಳೂ ಸಹ ಸಮಾಜ ಅಭಿವೃದ್ಧಿ ಯೋಜನೆಯ ಆಧಾರ ಸ್ತಂಭಗಳಾದವು. ಹೀಗೆ ಯೋಜನೆಯ ಪ್ರಾರಂಭದಿಂದ ಹಳ್ಳಿಗಳ ಸರ್ವತೋಮುಖ ಅಭಿವೃದ್ಧಿಯು ಸಮಾಜ ವಿಕಾಸ ಯೋಜನೆಯ (Community Development Scheme) ಮುಖ್ಯ ಹೊಣೆಯಾಗಿ ಪರಿಣಮಿಸಿತು. ಬರಲಿರುವ ಹಲವಾರು ಯೋಜನೆಗಳಲ್ಲಿಯೂ ಇದು ಮುಂದುವರಿಯಬಹುದೆಂದು ಊಹಿಸಬಹುದು.

ಸಮಾಜ-ಅಭಿವೃದ್ಧಿ ಯೋಜನೆಯು ಬಹುಮುಖದಿಂದ ಪರಿಶ್ರಮ ಪಡುವ ಯೋಜನಾಂಗವಾಗಿದೆ. ಇದು ತನ್ನುಪಾಂಗಗಳಾದ ಸಹಕಾರಿ ಸಂಸ್ಥೆ, ಗ್ರಾಮಪಂಚಾಯತಿ ಮತ್ತು ಸಾಂಸ್ಕೃತಿಕ ಚಟುವಟಿಕೆಗಳ ಮುಖಾಂತರ ಪ್ರಭಾವವನ್ನು ಬೀರುತ್ತದೆ. ಸಹಕಾರೀ ಸಂಘವು ( Co-operative Society ) ಸಹಾಯಕ, ಕಾರ್ಯಪ್ರವೃತ್ತಿಯ ಮತ್ತು ಸಲಹೆ ನೀಡುವ ಒಂದು ಅಂಗವಾದರೆ, ಪಂಚಾಯತಿಯು ಆಡಳಿತದ ಸೂತ್ರಗಳನ್ನು ಹಿಡಿದು ಅನೇಕ ಅಭಿವೃದ್ಧಿ ಕಾರ್ಯಗಳನ್ನು ಸುಗಮ

ವಾಗಿ ಸಾಗುವಂತೆ ನೋಡಿಕೊಳ್ಳುವದು. ಈ ಎರಡೂ ಅಂಗ ಗಳು ಸಾಮಾಜಿಕ ಕ್ಷೇತ್ರದಲ್ಲಿಯೂ ಸಹ ತಮ್ಮ ಪ್ರಭಾವವನ್ನು ಬೀರಿ ಸಾಂಘಿಕ ಜೀವನವನ್ನು ರಸವತ್ತಾಗಿ ಪರಿಣಮಿಸಬಲ್ಲವು. ಸಾಂಸ್ಕೃತಿಕ ಚಟುವಟಿಕೆಗಳು ಉತ್ತೇಜನ ಪಡೆದು, ಭಾವ ವಿಕಾಸವಾಗುವ ಸಂಭವ ಕಂಡು ಬರುವದು. ಪರಸ್ಪರ ಒಂದುಗೂಡಿ ಆರ್ಥಿಕ, ರಾಜಕೀಯ, ಸಾಮಾಜಿಕ ಮತ್ತು ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಅಭಿವೃದ್ಧಿ ಸಾಧಿಸುವ ಬಗೆಯನ್ನು ಕಂಡು ಹಿಡಿಯಬಹುದು. ಬಲು ಉದಾತ್ತವಾದ, ಬಹು ಆಳವಾದ ಮತ್ತು ಸರ್ವದಿಶೆಯಿಂದ ಗ್ರಾಮಾಭ್ಯುದಯಕ್ಕಾಗಿ ರೂಪಿಸಲ್ಪಟ್ಟ ಸಮಾಜ-ಅಭಿವೃದ್ಧಿ ಯೋಜನೆಯು ನಮ್ಮ ರಾಷ್ಟ್ರೀಯ ಪಂಚವಾರ್ಷಿಕ ಯೋಜನೆಗಳ ಮುಖ್ಯ ಅಂಗ ವಾಗಿದೆ ಮತ್ತು ಕರ್ತೃತ್ವಶಾಲಿಯಾಗಿದೆ. ಇಂಥ ಯೋಜ ನೆಯು (Scheme) ಪರಿಪೂರ್ಣ ಮಾಹಿತಿಯಾಗಬೇಕಾ ದರೆ, ಮೊದಲು ಸಹಕಾರದ ಪಾತ್ರ ಮತ್ತು ಪಂಚಾಯತಿಗಳ ನಿಲುವೆಯನ್ನು ಅರಿತುಕೊಳ್ಳುವದವಶ್ಯ. ಅಂದಮೇಲೆ, ನಾವು ಮೊದಲು ಸಹಕಾರದ ಬಗ್ಗೆ ತಿಳಿದುಕೊಂಡು, ಪಂಚಾ ಯತಿಗಳ ಸಮೀಕ್ಷೆ ಮಾಡಿ ಮುಂದೆ ಸಮಾಜ-ವಿಕಾಸ ಯೋಜ ನೆಯ ರೂಪ-ರೇಷೆಗಳನ್ನು ವಿಮರ್ಶಿಸೋಣ.

## ೨. ಸಹಕಾರ (Co-operation)

ಸಹಕಾರ ಕೇವಲ ಒಂದು ಉದಾತ್ತ ವಿಚಾರಧಾರೆಯಲ್ಲವೆ, ಕಾರ್ಯವಾಹಕ ಸಂಸ್ಥೆಯಾಗಿದೆ. ತಾತ್ವಿಕತೆ ದೃಷ್ಟಿಯಿಂದ, ಸಹಕಾರವು ಪ್ರಜಾಸತ್ತೆಯಲ್ಲಿ (Democracy) ಬಲು ಆದರಣೀಯವಾಗಿದೆ. ಹೇಗೆಂದರೆ, ಸಹಕಾರವು ಪ್ರಜಾಸತ್ತಾತ್ಮಕ ತತ್ವಗಳ ಮೇಲೆ ಕಟ್ಟಲ್ಪಟ್ಟಿದೆ. ಸಹಕಾರಿ ಸಂಸ್ಥೆಗಳು ನಿಜವಾಗಿಯೂ ಜನತೆಗಾಗಿ ತೆರೆಯಲ್ಪಟ್ಟಿವೆ, ಜನರ ಸಲುವಾಗಿ ಹುಟ್ಟಿವೆ, ಜನರಿಂದ ನಡೆಯಲ್ಪಡುತ್ತವೆ ಎನ್ನಬಹುದು. ಅಂದಮೇಲೆ ಇವು ಯಾವ ಪ್ರಕಾರದ ಜನರ ಸಲುವಾಗಿ ಇವೆ ಎಂಬುದನ್ನು ತಿಳಿಯಬೇಕು. ಸಾಮಾನ್ಯವಾಗಿ, ಆರ್ಥಿಕ ದೃಷ್ಟಿಯಿಂದ ಬಲಹೀನವಾದಂಥ ಜನರ ಸಲುವಾಗಿ ಇವು ಹುಟ್ಟಿವೆ. ಕಾರಣ ಸಹಕಾರವು ಜನರ ಕಲ್ಯಾಣವನ್ನು ಬಯಸುವ ಸಂಸ್ಥೆ ಎಂದ ಹಾಗಾಯಿತು. ಇದೇ ವಿಚಾರವನ್ನು ಮುಂದುವರೆಸಿದರೆ, ಆರ್ಥಿಕ ರಂಗದಲ್ಲಿ ಸಹಕಾರವು ಜನರಿಗೆ ಸಹಾಯಕವಾಗಿದೆ. ಉದಾಹರಣಾರ್ಥ, ಖಾಸಗಿ ರಂಗವು (Private Sector) ಬಹುಶಃ ಲಾಭಬಡಕತನವಾಗಿದೆ, ಇವರಿಂದ ಕೂಲಿಕಾರರ ಶೋಷಣೆ ನಡೆಯುತ್ತದೆ ಎನ್ನಬಹುದು. ಆದರೆ ಸಹಕಾರಿ ರಂಗವು (Co-operative Sector) ಲಾಭಕ್ಕೆ ಹೆಚ್ಚು ಮಹತ್ವ ಕೊಡದೆ ಜನರಿಗೆ ಸೇವೆ ಸಲ್ಲಿಸುವಲ್ಲಿ ಮುಂದೆ ಬರುತ್ತದೆ. ಇಂಥ ಸಂಸ್ಥೆಯಲ್ಲಿ ಕೂಲಿಕಾರರ ಶೋಷಣೆಗೆ (Exploit-

ation) ಮತ್ತು ಯಾವ ತರದ ಅನ್ಯಾಯಕ್ಕೆ ಆಸ್ಪದವಿಲ್ಲ. ಸಹಕಾರಿ ರಂಗದಲ್ಲಿ 'ಎಲ್ಲರೂ ತನಗಾಗಿ, ತಾನು ಎಲ್ಲರಿಗಾಗಿ' ಎಂಬ ತತ್ವವಿದ್ದು, ಪ್ರತಿಯೊಬ್ಬರೂ ಸರಿಸಮಾನರು. ಆದರೆ ಖಾಸಗಿ ರಂಗದಲ್ಲಿ 'ದುಡ್ಡಿದ್ದವನೇ ದೊಡ್ಡಪ್ಪ'. ಬಂಡವಳದ ಶಕ್ತಿಯ ಮೇಲೆ ಒಬ್ಬರು ಮತ್ತೊಬ್ಬರ ಮೇಲೆ ಏರಿ ಕೂಡುವರು, ಅಲ್ಲದೇ ಅವರೇ ಸತ್ತೆಯನ್ನು ನಡೆಸುವರು. ಅಂಥ ಕೆಲ ಜನರ ಕೈಯಲ್ಲಿಯೇ ರಾಷ್ಟ್ರದ ಬಹುಪ್ರಮಾಣದ ಸಂಪತ್ತು ಉಳಿಯುವದು. ಹೀಗಾಗಿ ಸ್ವಲ್ಪೇ ಜನರು (ಶ್ರೀಮಂತರು) ಉಳಿದೆಲ್ಲ ಜನರ ಮೇಲೆ ಜೀವಿಸುವರು. ಇಂಥ ಅಸಹನೀಯ ವರ್ತನೆ ಸಹಕಾರದಲ್ಲಿ ಕಂಡುಬರುವದಿಲ್ಲ. ಪ್ರತಿಯೊಬ್ಬನೂ ತನ್ನ ಶಕ್ತಿಗನುಗುಣವಾಗಿ ವಂತಿಕೆ ಹಣ ಕೊಟ್ಟು ಸರಿಸಮಾನ ಹಕ್ಕನ್ನು ಪಡೆಯುವನು. ಅವನಿಗೆ ಪ್ರತಿಯೊಂದು ನಿರ್ಣಯ ಮಾಡಲು ಅಥವಾ ಕೈಕೊಳ್ಳಲು ಉಳಿದ ಸದಸ್ಯರಷ್ಟೇ ಹಕ್ಕು ಇದೆ. ಹೀಗಾದ ಮೇಲೆ, ಸಹಕಾರವೂ ಪ್ರಜಾಸತ್ತೆಯ ಹಾಗೆ ಪ್ರತಿಯೊಬ್ಬ ಸದಸ್ಯನಿಗೆ ಸರಿಸಮಾನ ಹಕ್ಕುಬಾಧ್ಯತೆಗಳನ್ನು ಕೊಡುತ್ತದೆ.

ಮತ್ತೊಂದು ದೃಷ್ಟಿಯಿಂದ, ಸಹಕಾರವು ಜನತೆಯದ್ದಾಗಿದೆ, ಜನರಿಂದಲೇ ನಡೆಯುತ್ತದೆ ಎನ್ನಬಹುದು. ಸರಕಾರಿ ರಂಗ (Public Sector) ದಲ್ಲಿಯ ಹಾಗೆ ಸಹಕಾರದಲ್ಲಿ ಸರಕಾರದ ಹೆಚ್ಚಿನ ಹಸ್ತಕ್ಷೇಪವಾಗಲಾರದು. ಇಲ್ಲಿ ಅಧಿಕಾರಿಗಳ ಅಧಿಕಾರ ಸತ್ತೆ ಕಂಡು ಬರದು. ಸದಸ್ಯರುಗಳೇ ಎಲ್ಲ ಕಾರ್ಯಭಾರವನ್ನು ವ್ಯವಸ್ಥಾಪಕ ಮಂಡಳಿಯ ಮುಖಾಂತರ ನಡೆಯಿಸುವರು. ಈ ಕಾರ್ಯವೂ ಸಹ ಅಧಿಕಾರದ ಸೊನ್ನೆ

ಯಲ್ಲ. ಇದಲ್ಲದೆ, ಸರಕಾರಿ ರಂಗದಲ್ಲಿರುವಂತೆ ಏಕ ಸ್ವಾಮ್ಯದ (totalitarianism) ಚಿನ್ಹೆಗಳು ಸಹಕಾರದಲ್ಲಿ ಕಂಡುಬರುವದಿಲ್ಲ. ಸಾಮೂಹಿಕ ಸ್ವಾಮ್ಯ ಮತ್ತು ಸತ್ತೆಗಳೇ ಸಹಕಾರದ ಗುರಿ. ಈ ಮೇಲಿನ ಕೆಲ ವಿಚಾರಗಳಿಂದ ಸಹಕಾರವು ಸರಕಾರಿ ರಂಗ ಮತ್ತು ಖಾಸಗಿ ರಂಗಗಳಲ್ಲಿರುವ ಕುಂದುಕೊರತೆಗಳನ್ನು ದೂರಮಾಡುತ್ತದೆ ಎಂದ ಹಾಗಾಯಿತು. ಬಡವರ ಆಧಾರಿ, ರೈತರ ಕುಲೋದ್ಧಾರಿ, ಸೇವೆಯ ತವರುಮನೆ, ಮತ್ತು ಸರ್ವಜನರ ಸೊತ್ತು- ಸಹಕಾರ. ಸಂಕ್ಷಿಪ್ತವಾಗಿ, ಸಹಕಾರದ ತತ್ವಗಳು ಕೆಳಗಿನಂತಿರುವವು:—

(೧) ಐಚ್ಛಿಕ ಸದಸ್ಯತ್ವ ಅಂದರೆ ಒತ್ತಾಯಕ್ಕೆ ಅನುವಿಲ್ಲ.

(೨) ಪ್ರಜಾಸತ್ತಾತ್ಮಕ ಕಾರ್ಯನಿರ್ವಹಣೆ ಅಥವಾ ವ್ಯವಸ್ಥೆ.

(೩) ಪರಸ್ಪರ ಸಹಾಯ (Mutual help) ಮತ್ತು ಸ್ವಾವಲಂಬನೆ (self-reliance)

(೪) ಸೇವಾತತ್ಪರತೆ ಅಂದರೆ ಲಾಭಬಡಕತನವಲ್ಲ.

(೫) ಶೈಕ್ಷಣಿಕ ಮಹತ್ವ (Educative Value).

(೬) ಧಾರ್ಮಿಕ ಮತ್ತು ರಾಜಕೀಯ ಉದಾಸೀನತೆ (Political and religious neutrality ).

(೭) ಸಮಾನತೆ (equality).

(೮) ಮುಕ್ತ ಸದಸ್ಯತ್ವ ( open membership ).

ನಮ್ಮ ದೇಶದಲ್ಲಿ ಸಹಕಾರಿ ಅಂದೋಲನವು ೧೯೦೪ ರಿಂದ ಆರಂಭವಾಗಿದೆ. ಆದರೂ ಯೋಜನಾಯುಗದಲ್ಲಿ ಅದಕ್ಕೆ ಬಲು ವಿಶಿಷ್ಟವಾದ ಅಸ್ತಿತ್ವ ಬಂದಿದೆ. ಮೊದಲನೆಯ ಪಂಚವಾರ್ಷಿಕ ಯೋಜನೆಯ ಸುರುವಿನಲ್ಲಿ ಸಹಕಾರಿ ಸಂಘಗಳು ಕೇವಲ ಪತ್ತಿನ ಸಂಸ್ಥೆ (Credit Societies) ಗಳಾಗಿದ್ದವು. ಮೊದಲನೆಯ ಯೋಜನೆಯ ಕಾಲದಲ್ಲಿ ಈ ಪದ್ಧತಿಯಲ್ಲಿ ಹೆಚ್ಚಿನ ಬದಲಾವಣೆಗಳಾಗಲಿಲ್ಲ. ಆದರೆ ಎರಡನೇ ಪಂಚವಾರ್ಷಿಕ ಯೋಜನೆಯಲ್ಲಿ ಸಹಕಾರವು ಬಲು ವಿಸ್ತಾರಗೊಂಡಿತು ಮತ್ತು ವಿಶಿಷ್ಟ ಸ್ಥಾನಮಾನವುಳ್ಳದ್ದಾಯಿತು. ಹೀಗಾಗಲು ರಿಜರ್ವ ಬ್ಯಾಂಕಿನ ಗ್ರಾಮೀಣ ಪತ್ತಿನ ಸಮೀಕ್ಷಾಕಮೀಟಿಯ (Rural Credit Survey Committee) ಶಿಫಾರಸುಗಳೇ ಕಾರಣ. ಅವುಗಳಂತೆಯೇ (೧) ಸಹಕಾರವು ವರ್ಧಿಸಲು ಸಹಕಾರಿ ಸಂಸ್ಥೆಗಳ ಬಂಡವಾಳದಲ್ಲಿ ಸರಕಾರದ ಪಾಲೂ ( Participation in Share-Capital ) ಕೂಡಿತು, (೨) ಸಹಕಾರೀ ವ್ಯವಸಾಯ ಸಂಘಗಳು ಹೆಚ್ಚಾಗಿ ಅಸ್ತಿತ್ವದಲ್ಲಿ ಬಂದವು, (೩) ಪತ್ತು ಮತ್ತು ಒಕ್ಕಲುತನದ ಹುಟ್ಟುವಳಿಯ ಮಾರಾಟದ ಸಂಯೋಜನೆಯಾಯಿತು, (೪) National

Co-operative Development and Ware-housing Board ಎಂಬ ರಾಷ್ಟ್ರೀಯ ಮಂಡಲವು ಹುಟ್ಟಿತು. ಅದರಿಂದಾಗಿ ಉಗ್ರಾಣಗಳು (Ware-Houses) ಹೆಚ್ಚಾಗಿ ಕಾಣಿಸಲು ಸುರುವಾದವು. ಕೊನೆಯದಾಗಿ, ಸಹಕಾರಿ ಸಂಸ್ಥೆಗಳಿಗೆ ಆರ್ಥಿಕ ನೆರವು ನೀಡಲು National Agricultural Credit ( Long-term operations ) Fund, National Agricultural Credit (Stabilization) Fund ಮುಂತಾದ ಸಹಾಯಕ ವ್ಯವಸ್ಥೆಯ ಅಂಗಗಳು ಹುಟ್ಟಿದವು. ಮೂರನೆಯ ಪಂಚವಾರ್ಷಿಕ ಯೋಜನೆಯಲ್ಲಿ ಸಹಕಾರಿ ಸಂಸ್ಥೆಗಳ ಕಾರ್ಯಭಾರ ಹೆಚ್ಚಾಯಿತು. ಅವು ಪತ್ತಿನ ಸಂಸ್ಥೆಗಳಾಗಿ ಉಳಿಯದೆ, ಕೃಷಿ ಉತ್ಪಾದನೆಯ ವಾಹಕಗಳಾಗಿ ಪರಿಣಮಿಸಿದವು. ಅನೇಕ ದಿಶೆಗಳಲ್ಲಿ (diversified) ಕಾರ್ಯಪ್ರವೃತ್ತವಾದವು ಮತ್ತು ಸೇವಾಸಂಘಗಳು (Service co-operatives ) ಹುಟ್ಟಿದವು. ಸರಕಾರದ ಹಸ್ತಕ್ಷೇಪ ಮತ್ತು ಅಧಿಕಾರಿಗಳ ಕಾಟ ( red-tapism ) ಕಡಿಮೆಯಾಗುವಂತೆ ಪ್ರಯತ್ನಗಳು ಮಾಡಲ್ಪಟ್ಟವು. ಸಹಕಾರಿ ಸಂಸ್ಥೆಗಳು ಮತ್ತು ಪಂಚಾಯತಿಗಳಲ್ಲಿ ಪರಸ್ಪರ ಹೊಂದಾಣಿಕೆ ಸುರುವಾಯಿತು. ಅಂತೂ ಸಹಕಾರಿ ಸಂಘಗಳ ಬೆಳವಣಿಗೆಯನ್ನು ಕೆಳಗಿನಂತೆ ಹೇಳಬಹುದು :

## ಸಹಕಾರೀ ಸಂಘಗಳ ರೂಪರೇಷೆ (೧೯೫೦-೫೧ — ೧೯೬೦-೬೧)

| | ೧೯೫೦-೫೧ | ಸೂ. ಅಂಕಿ | ೧೯೫೫-೫೬ | ಸೂ. ಅಂಕಿ | ೧೯೬೦-೬೧ | ಸೂ. ಅಂಕಿ |
|---|---|---|---|---|---|---|
| ಒಟ್ಟು ಸಹಕಾರಿಸಂಘಗಳು (ಸಾವಿರದಲ್ಲಿ) | ೧೮೧.೪೯ | ೧೦೦ | ೨೪೦.೪೦ | ೧೩೩ | ೩೩೨.೪೯ | ೧೮೯ |
| ಒಟ್ಟು ಸದಸ್ಯರ ಸಂಖ್ಯೆ (ಲಕ್ಷದಲ್ಲಿ) | ೧೩೭.೧೫ | ೧೦೦ | ೧೭೬.೨೨ | ೧೨೮ | ೩೪೨.೪೫ | ೨೫೦ |
| ದುಡಿಯುವ ಬಂಡವಲು (Total working capital of all types) (ಕೋಟಿಗಳಲ್ಲಿ) | ೨೭೫.೮೫ | ೧೦೦ | ೪೬೮.೮೨ | ೧೭೦ | ೧೩೧೨.೦೯ | ೪೭೬ |
| ಸಹಕಾರದ ಪ್ರಸಾರ ಕ್ಕೊಳಗಾದ ಗ್ರಾಮೀಣ ಕುಟುಂಬಗಳು (ಶೇಕಡಾ) (Number of rural families covered) | ೮.೦% | — | ೧೫.೦% | — | ೩೪.೦% | — |

ಒಟ್ಟು ಸಂಘಗಳ ಸಂಖ್ಯೆ ಮತ್ತು ಸದಸ್ಯರ ಸಂಖ್ಯೆಯನ್ನು ನೋಡಲಾಗಿ, ೧೯೫೦-೫೧ ರಲ್ಲಿ ೧.೮ ಲಕ್ಷ ಸಂಘಗಳಿದ್ದರೆ, ೧೯೫೫-೫೬ ರಲ್ಲಿ ೨.೪ ಲಕ್ಷಗಳಾದವು. ಮುಂದೆ ೧೯೬೦-೬೧ ರಲ್ಲಿ ೨.೨ ಲಕ್ಷವಾದವು. ಈಗಂತೂ ಅಂದರೆ ಮೂರನೆಯ ಪಂಚವಾರ್ಷಿಕ ಯೋಜನೆಯ ಕೊನೆಗೆ ಪ್ರತಿಯೊಂದು ಹಳ್ಳಿಯು ಸಹಕಾರದ ಒಲುಮೆಗೆ ಒಳಗಾಗಿವೆ. ಸಾಲಗಳ ವಿತರಣೆಯು ೧೯೫೦-೫೧ ರಲ್ಲಿ ೨೩ ಕೋಟಿ ರೂಪಾಯಿಗಳಾದರೆ, ೧೯೫೫-೫೬ ರಲ್ಲಿ ೫೦ ಕೋಟಿಗೇರಿತು ಮತ್ತು ೧೯೬೦-೬೧ ರಲ್ಲಿ ೨೨೮ ಕೋಟಿ ರೂಪಾಯಿಗಳಷ್ಟು ಆಯಿತು.

ಸಹಕಾರಿ ಸಂಸ್ಥೆಗಳು ಅನೇಕ ಕ್ಷೇತ್ರಗಳಲ್ಲಿಯೂ ಹಬ್ಬಿವೆ. ಆದರೆ ಇನ್ನೂ ಸಾಕಷ್ಟು ಆಸ್ಪದವಿದೆ ಎನ್ನಬಹುದು. ಇಲ್ಲಿಯವರೆಗೆ ಹರಡಿದ ಕ್ಷೇತ್ರಗಳನ್ನು ನೋಡಲಾಗಿ ನೂರಕ್ಕೆ ೬೭ರಷ್ಟು ಪತ್ತಿನ ಸಂಘಗಳು, ನೂರಕ್ಕೆ ೧೦ ರಷ್ಟು ನೇಕಾರರ ಮತ್ತು ಇತರ ಔದ್ಯೋಗಿಕ ಸಂಘಗಳು ಇವೆ. ಉಳಿದ ಕ್ಷೇತ್ರಗಳಲ್ಲಿ ಸಹಕಾರವು ಈಗೀಗ ಕೈಹಾಕಲಿಕ್ಕೆ ಹತ್ತಿದ್ದರಿಂದ, ಯಾವ ಕ್ಷೇತ್ರದಲ್ಲಿಯೂ ಸಹಕಾರಿ ಸಂಘಗಳ ಸಂಖ್ಯೆ ನೂರಕ್ಕೆ ಹತ್ತರವರೆಗೆ ಮುಟ್ಟಿಲ್ಲ. ಗ್ರಾಹಕರ ಸಂಘಗಳು ಒಟ್ಟು ಎಲ್ಲ ಸಂಘಗಳ ನೂರಕ್ಕೆ ೨ ರಷ್ಟಿವೆ. ಕೆಳಗಿನ ಮಾಹಿತಿಯಿಂದ ಹೆಚ್ಚು ಸ್ಪಷ್ಟವಾಗಿ ಮೇಲಿನ ವಿಚಾರಗಳು ಕಂಡು ಬರುವವು.

## ವಿವಿಧ ಕ್ಷೇತ್ರಗಳಲ್ಲಿ ಸಹಕಾರದ ವಿಸ್ತರಣೆ (೧೯೬೦—೬೧)
## (Diversification of Co-operative Societies)

| ಕ್ಷೇತ್ರ | ಸಂಘಗಳು | | ಸದಸ್ಯತ್ವ | | ಜಾಲತಿ ಬಂಡವಲು | |
|---|---|---|---|---|---|---|
| | ಸಂಖ್ಯೆ | ಶೇಕಡಾ | ಲಕ್ಷ | ಶೇಕಡಾ | ಕೋಟಿ ರೂ. | ಶೇಕಡಾ |
| ಪತ್ತಿನ ಸಂಘಗಳು | ೨,೨೨,೪೩೩ | ೬೭ | ೧೮೯.೫೯ | ೫೫ | ೮೭೯.೫೫ | ೬೭ |
| ಮಾರಾಟ ಮತ್ತು ಮಾರ್ಪಾಟಿನ ಸಂ. | ೧೯,೦೬೬ | ೬ | ೪೪.೭೭ | ೧೩ | ೧೩೩.೦೪ | ೧೦ |
| ವ್ಯವಸಾಯ-ಮತ್ತಿತರ ಸಂ. | ೨೦,೫೬೩ | ೬ | ೧೨.೯೭ | ೪ | ೨೦.೦೪ | ೨ |
| ವ್ಯವಸಾಯೇತರ ಸಂ. | ೧೧,೯೯೫ | ೪ | ೪೫.೭೩ | ೧೩ | ೧೫೦.೧೧ | ೧೧ |
| ನೇಕಾರ ಮತ್ತಿತರ ಔದ್ಯೋಗಿಕ | ೩೩,೨೫೬ | ೧೦ | ೨೫.೩೮ | ೮ | ೪೯.೪೯ | ೪ |
| ಗ್ರಾಹಕರ ಸಂಘಗಳು | ೭,೧೩೩ | ೨ | ೧೩.೪೧ | ೪ | ೧೧.೮೨ | ೧ |
| ಉಳಿದ ಮತ್ತಿತರ ಸಂ. | ೧೮,೦೪೨ | ೫ | ೧೦.೬೦ | ೩ | ೬೭.೮೪ | ೫ |
| ಒಟ್ಟು | ೩,೩೨,೪೮೮ | ೧೦೦ | ೩,೪೨.೪೫ | ೧೦೦ | ೧,೩೧೨.೦೯ | ೧೦೦ |

ಸದಸ್ಯರುಗಳ ಪ್ರಮಾಣದಿಂದಲೂ, ಒಟ್ಟು ಸದಸ್ಯರ ನೂರಕ್ಕೆ ೫೫ರಷ್ಟು ಪತ್ತಿನ ಸಂಘದ ಸದಸ್ಯರಿರುವರು. ವ್ಯಾಪಾರಿ ಮತ್ತು ಮಾರಾಟ ಸಂಘಗಳಲ್ಲಿ ನೂರಕ್ಕೆ ೧೩ರಷ್ಟು ಅದರಂತೆ ನೂರಕ್ಕೆ ೧೩ರಷ್ಟು ವ್ಯವಸಾಯೇತರ ಸಂಘಗಳ ಸದಸ್ಯರಿದ್ದಾರೆ. ಚಾಲತೀ ಬಂಡವಲಿನ ನೂರಕ್ಕೆ ೬೭ರಷ್ಟು ಪತ್ತಿನ ಸಂಘಗಳಲ್ಲಿ ತೊಡಗಿದೆ. ಅಂದಮೇಲೆ ಸಹಕಾರೀ ಬಲವು ಇನ್ನೂ ಹೆಚ್ಚುಹೆಚ್ಚಾಗಿ ಉಳಿದ ಕ್ಷೇತ್ರಗಳಲ್ಲಿ ಬೆಳೆಯುವದು ಅವಶ್ಯವಿದೆ ಎಂದು ಕಂಡುಬರುವದು. ಅಂತೂ, ಪ್ರತಿಯೊಂದು ಪ್ರಕಾರದ ಸಂಘಗಳು ತಮ್ಮ ವೈಯಕ್ತಿಕ ವೈಶಿಷ್ಟ್ಯದಿಂದ ಕಾರ್ಯಪ್ರವೃತ್ತವಾಗಿವೆ.

ಪತ್ತಿನ ಸಂಘಗಳು ರೈತರ ಮತ್ತು ಉಳಿದ ಸದಸ್ಯರ ಆರ್ಥಿಕ ದುರ್ಬಲತೆಯನ್ನು ನೀಗುವಂತೆ ಮಾಡಿ ಅವರನ್ನು ಬಂಡವಾಳುದಾರರ ಮತ್ತು ಇತರ ಸಾಹುಕಾರ ಜನರ ದಾಸ್ಯದಿಂದ ಬಿಡಿಸಲು ಪ್ರಯತ್ನಿಸುತ್ತಿವೆ. ಅನೇಕ ಆರ್ಥಿಕ ಬಿಕ್ಕಟ್ಟುಗಳನ್ನು ಬಗೆಹರಿಸುತ್ತಿವೆ. ಇದಲ್ಲದೆ ಸಹಕಾರಿ ಸಾಲಗಳು ಕೃಷಿಕ್ಷೇತ್ರದಲ್ಲಿ ಸುಧಾರಣೆಯನ್ನು ತರಲು ಸಹಾಯವಾಗುವವು. ಉದಾಹರಣಾರ್ಥ, ಸುಧಾರಿಸಿದ ಬೀಜ ಮತ್ತು ಗೊಬ್ಬರವನ್ನು ಪೂರೈಸುವವು. ಟ್ರ್ಯಾಕ್ಟರ ಮತ್ತು ಸುಧಾರಿಸಿದ ಸಾಮಾನುಗಳನ್ನು ಉಪಯೋಗಿಸಲು ಪ್ರೋತ್ಸಾಹವನ್ನೀಯುವವು. ಉತ್ತಮ ಬಿತ್ತುಗಳನ್ನು ಪೂರೈಸಿ ಕೃಷಿಕಾರ್ಯಗಳನ್ನು ಉಚ್ಚ ಮಟ್ಟದಲ್ಲಿ ಸಾಗಿಸುವಂತೆ ನೋಡಿಕೊಳ್ಳುವವು. ಈ ಪ್ರಕಾರ ಅನೇಕ ರೀತಿಯಿಂದ ಸಹಕಾರಿ ಸಾಲಗಳು ಸದಸ್ಯರಿಗೆ ಸಹಾಯವಾಗುವವು.

ಮಾರಾಟದ ಸಂಘಗಳು ರೈತರಿಗೆ ಉತ್ತಮ ಮತ್ತು ನ್ಯಾಯವಾದ ಬೆಲೆಗಳನ್ನು ತಂದುಕೊಡಲು ಶ್ರಮಿಸುತ್ತವೆ. ಇದರಿಂದ ಅವರ ಉತ್ಪನ್ನ ಹೆಚ್ಚುವದು. ಅಲ್ಲದೆ ಮಧ್ಯಸ್ಥಿಗಾರ ಜನರನ್ನು ಅಂದರೆ ದಲ್ಲಾಳಿಗಳನ್ನು ಮತ್ತು ಇತರ ಶೋಷಕರನ್ನು ದೂರೀಕರಿಸುತ್ತವೆ. ಇದರಿಂದ ಗ್ರಾಹಕರಿಗೂ ಸರಿಯಾದ ಬೆಲೆಗಳಿಗೆ ಆಹಾರದ ಮತ್ತು ಇತರ ಸಾಮಾನು ಸಿಗುತ್ತವೆ. ದೊಡ್ಡ ಪ್ರಮಾಣದಿಂದ ಮಾರಾಟ ಮಾಡಲು ಸಾಗಾಟದಲ್ಲಿಯ ಖರ್ಚು ಕಡಿಮೆಯಾಗುವದು ಮತ್ತು ಶೇಖರಿಸುವ ( Collection or Procurement ) ಸಮಯದಲ್ಲಿಯೂ ಉಳಿತಾಯವಾಗುವದು. ಅದರಂತೆ ರೈತರಲ್ಲಿ bargaining capacity ಬೆಳೆಯುವದು. ಇದು ಬಲು ಮುಖ್ಯ ಅಂಶವೆನ್ನಬಹುದು.

ಮಾರ್ಪಾಟಿನ ಸಂಘಗಳು ( Processing Co-operatives ) ಕೃಷಿ ಹುಟ್ಟುವಳಿಗಳ ಮೌಲ್ಯವನ್ನು ಹೆಚ್ಚಿಸುತ್ತವೆ. ಮಿಶ್ರಿತ ಮತ್ತು ಕಗ್ಗ ಸ್ಥಿತಿಯಲ್ಲಿರುವ ಪದಾರ್ಥಗಳನ್ನು ಉತ್ತಮ ರೀತಿಯಿಂದ ಮಾರ್ಪಡಿಸಿ ಅವುಗಳಿಗೆ, ಹೆಚ್ಚು ಬೆಲೆ ಬರುವಂತೆ ಮಾಡುತ್ತವೆ. ಇಲ್ಲದಿದ್ದರೆ, ಬೇರೆ ಮಧ್ಯಗಾರ ಜನರು ತಮ್ಮ ಹಸ್ತಕ್ಷೇಪದಿಂದ ಲಾಭಪಡಿಕೊಳ್ಳುತ್ತಾರೆ. ಅದೇ ಲಾಭಾಂಶವು ಮಾರ್ಪಾಟಿನ ಸಂಸ್ಥೆಗಳ ಸದಸ್ಯರಲ್ಲಿ ಉಳಿಯುವದು ಸಮಂಜಸವೆನಿಸುತ್ತದೆ. ಈ ಸಂಘಗಳು ತಾಂತ್ರಿಕ ಮಟ್ಟವು ಬೆಳೆಯಲು ( Technical progress ) ಸಹಾಯಕವಾಗುತ್ತವೆ.

ವ್ಯವಸಾಯ ಸಂಘಗಳು (Co-operative farming Societies) ಒಕ್ಕಲುತನದ ಹುಟ್ಟುವಳಿಯನ್ನು ಹೆಚ್ಚಿಸುತ್ತವೆ. ಇದರಿಂದ ಹುಟ್ಟುವಳಿಯ ಮಾರಲರ್ಹ ಉಳಿತಾಯವು (Marketable surplus ವರ್ಧಿಸಿ, ದೇಶದ ಅಭಿವೃದ್ಧಿಗೆ ಉಪಯೋಗವಾಗುತ್ತದೆ. ಇದು ಔದ್ಯಮೀಕರಣ (industrialization) ಮಾಡಲು ಸಹಾಯವಾಗುವದು. ರೈತರ ಪರಸ್ಪರ ಕಾರ್ಯ ಕುಶಲತೆಯನ್ನೂ (management capacity) ಹೆಚ್ಚಿಸುವದು. ಇದರಿಂದ ಭೂ-ಸುಧಾರಣೆಗಳು ಬಹಳ ಪ್ರಮಾಣದಿಂದ ನಡೆದು ಭೂಮಿಯ ಉತ್ಪಾದಕ ಶಕ್ತಿ (productivity) ಹೆಚ್ಚುವದು. ಈ ಸಂಘಗಳು ಜಮೀನುದಾರರ ಮತ್ತು ಸಾಗುವಳಿದಾರರ ಸಂಘರ್ಷಣೆಗಳನ್ನು ಕಡಿಮೆಮಾಡಿ ಒಕ್ಕಲುತನದ ಅಭಿವೃದ್ಧಿಗೆ ಅನುವು ಮಾಡಿಕೊಡುವವು. ಹಿಡುವಳಿಯ ಆಕಾರ (size of holding) ಹೆಚ್ಚಾಗಿ, ದೊಡ್ಡ ಪ್ರಮಾಣದ ಹಣವನ್ನು ಅನೇಕ ಸುಧಾರಣೆ ಕಾರ್ಯಗಳಲ್ಲಿ ತೊಡಗಿಸಲು ಸಾಧ್ಯವಾಗುವದು. ಸಂಘಗಳೇ ಮಾರಾಟ ಭಾರವನ್ನು (marketing) ಹೊತ್ತು ಉತ್ತಮ ಬೆಲೆಗಳನ್ನು ಪಡೆದು ರೈತರ ಆರ್ಥಿಕ ಭದ್ರತೆಯನ್ನು ಸಾಧಿಸಬಹುದು.

ಔದ್ಯೋಗಿಕ ಸಹಕಾರಿಗಳು (industrialco-operatives) ಯಾಂತ್ರಿಕ ಯುಗದಲ್ಲಿ ಅತ್ಯುತ್ತಮ ರೀತಿಯಿಂದ ಭಾಗವಹಿಸಲು ಯೋಗ್ಯವಾಗಿವೆ. ನಮ್ಮ ದೇಶ ಬುನಾದಿ ಕಾಲದಿಂದ ಕೈಗಾರಿಕೆ ಮತ್ತು ಕುಶಲತೆಯ ಕೇಂದ್ರ. ಬ್ರಿಟಿಶರ ಆಳಿಕೆಯಿಂದ ಕುಗ್ಗಿದ ಕೈಗಾರಿಕೆಗಳು ಈಗ ಪುನ-

ರುಜ್ಜೀವನ ಪಡೆಯಲು ಅವಕಾಶವಿದೆ. ಅಂಥ ಉದ್ದಿಮೆಗಳು ಸುಧಾರಿಸಿದ ಯಂತ್ರೋಪಕರಣಗಳನ್ನು ಉಪಯೋಗಿಸಿ ತಮ್ಮ ಉತ್ಪಾದಕ ಶಕ್ತಿಯನ್ನು ಹೆಚ್ಚಿಸಿಕೊಳ್ಳಬಹುದು. ಅದರಂತೆ ರಾಷ್ಟ್ರೀಯ ಔದ್ಯೋಗಿಕ ನೀತಿ ( industrial policy ) ಗನುಗುಣವಾಗಿ ಸಣ್ಣ ಪ್ರಮಾಣದ ಧಂಧೆಗಳಾಗಿ ಮಾರ್ಪಾಟಾಗಬಹುದು. ಅಲ್ಲದೇ ಅನೇಕ ದೊಡ್ಡ ಪ್ರಮಾಣದ ಯಂತ್ರಗಳನ್ನು ಉಪಯೋಗಿಸಿ ರಾಷ್ಟ್ರೀಯ ಔದ್ಯೋಗೀಕರಣಕ್ಕೆ ( industrialization ) ಸಹಾಯ ಮಾಡಬಹುದು. ಉದಾಹರಣಾರ್ಥವಾಗಿ, co-operative spinning and weaving industries ಮತ್ತು sugarcane Manufacturing industries ಎನ್ನಬಹುದು. ಲಕ್ಷಾನುಗಟ್ಟಲೆ ನಿರುದ್ಯೋಗಿಗಳಿಗೆ ( under-employed) ಉದ್ಯೋಗ ಸಿಗುತ್ತದೆ. ಅಲ್ಲದೆ ಅಂಥ ಜನರ ಕುಶಲತೆ ಅಭಿವೃದ್ಧಿಗೊಳಿಸಲು(skill development) ಅನುವಾಗುವದು. ಇದೇ ಮಾರ್ಗದಲ್ಲಿ ತಾಂತ್ರಿಕಾಭಿವೃದ್ಧಿಯನ್ನು ಕಾಣಬಹುದು. ದೇಶದ ಮೂಲೆ ಮೂಲೆಗಳಲ್ಲಿ ಪಸರಿಸಿದ ಸಣ್ಣ-ಪುಟ್ಟ ಉದ್ಯೋಗಗಳು ತಮ್ಮ ಶಕ್ತಿಗನುಗುಣವಾಗಿ ಸುಧಾರಿಸಿದ ಯಂತ್ರೋಪಕರಣಗಳನ್ನು ಉಪಯೋಗಿಸಿದರೆ ರಾಷ್ಟ್ರದ ಒಟ್ಟು ಉತ್ಪನ್ನ ಹೆಚ್ಚುವದು. ಅಲ್ಲದೇ ಸದಸ್ಯರ ಆರ್ಥಿಕ ಮಟ್ಟವೂ ಎತ್ತರಿಸುವದು. ಸದಸ್ಯರುಗಳು ನವೀನ ತಾಂತ್ರಿಕತೆ ಕಲಿತು ವ್ಯಾವಹಾರಿಕ ಜ್ಞಾನವನ್ನೂ (entre preneurial capacity ) ಗಳಿಸುವರು. ಈ ಜ್ಞಾನವು ನಮ್ಮ ದೇಶದಲ್ಲಿ ಹೆಚ್ಚೆಚ್ಚು ಬೆಳೆದು ಬರುವದು ಅತ್ಯವಶ್ಯವಾ-

ಗಿದೆ. ಇದಕ್ಕೆ ಅನುಕೂಲ ಸಾಧನವೆಂದರೆ, ಔದ್ಯೋಗಿಕ ಸಂಘಗಳೆನ್ನಬಹುದು. ಈ ಸಂಘಗಳ ಭವಿಷ್ಯ ವ್ಯವಸಾಯಿ ಸಂಘಗಳಂತೆ ಬಲು ವಿಸ್ತಾರವಾಗಿದೆ ಮತ್ತು ಉತ್ತೇಜನಕಾರಿಯಾಗಿದೆ ಎನ್ನಬಹುದು.

ಗೃಹನಿರ್ಮಾಣದ ಸಂಘಗಳೂ ಇತ್ತಿತ್ತಲಾಗಿ ಹೆಚ್ಚಾಗಿ ಹುಟ್ಟುತ್ತಲಿವೆ. ಇವು ತಮ್ಮ ಸದಸ್ಯರಿಗೆ ಹೊಸ ಮಾದರಿಯ, ಕಡಿಮೆ ವೆಚ್ಚವುಳ್ಳ ಆರೋಗ್ಯದಾಯಕ ಮನೆಗಳನ್ನು ಒದಗಿಸುವವು. ಭಾರತದಲ್ಲಿ ಆರ್ಥಿಕಾಭಿವೃದ್ಧಿಯ ಜೊತೆಗೆ ಹೊಸ ಮನೆಗಳ ಬೇಡಿಕೆಯು ಹೆಚ್ಚಾಗುತ್ತಾ ನಡೆದಿದೆ. ಅಲ್ಲದೆ, ಜನಸಂಖ್ಯೆ ಬೆಳೆಯುತ್ತಾ ಹೋದಂತೆ ಇರಲು ಮನೆಗಳನ್ನು ಕಟ್ಟಿಸುವದವಶ್ಯ. ಆರೋಗ್ಯದಾಯಕ ದೃಷ್ಟಿಯಿಂದ ಕಟ್ಟಿಸಲ್ಪಡುವ ಮನೆಗಳು ಜನರ ಕರ್ತೃತ್ವಶಕ್ತಿಯನ್ನು ಹೆಚ್ಚಿಸುತ್ತವೆ, ಇದರಿಂದ ದೇಶದ ಉತ್ಪಾದನಾ ಸಾಮರ್ಥ್ಯ (Productive capacity) ಬೆಳೆಯುತ್ತದೆ. ಇಂಥ ಕಾರ್ಯವಾಹಕ ಶಕ್ತಿ ನಮ್ಮ ಹಿಂದುಸ್ಥಾನದಲ್ಲಿ ಬೆಳೆದು ಬರುವದು ಬಹಳ ಅವಶ್ಯವಾಗಿದೆ. ಆರ್ಥಿಕ ದುರ್ಬಲತೆಯಿಂದ ಹೊಸ ಮನೆಗಳನ್ನು ಕಟ್ಟಿಸಲು ಸಾಧ್ಯವಿಲ್ಲದವರು, ಇಂಥ ಸಂಘಗಳನ್ನು ಮಾಡಿ ಅವುಗಳಿಂದ ಲಾಭಪಡೆಯಬೇಕು. ಸದಸ್ಯರ ವಂತಿಕೆಹಣದ ಜೊತೆಗೆ ಸರಕಾರವೂ ಸಾಲವನ್ನು ಮನೆ ಕಟ್ಟಿಸುವ ಸಂಘಗಳಿಗೆ ಕೊಡುತ್ತವೆ. ದೊಡ್ಡ ಶಹರುಗಳಲ್ಲಿ ಈ ಸಂಘಗಳಿಗೆ ಸಾಕಷ್ಟು ಬೆಂಬಲವಿದೆ ಎನ್ನಬಹುದು.

ಹಾಲು ಉತ್ಪಾದಕ ಮತ್ತು ಪೂರೈಕೆಯ ಸಹಕಾರಿ ಸಂಘಗಳನ್ನು ಮರೆಯುವಂತಿಲ್ಲ. ಒಂದಾನೊಂದು ಕಾಲ

ದಲ್ಲಿ ಹಾಲು ತುಪ್ಪಗಳಿಂದ ಕೈತೊಳೆಯುವ ಭಾರತೀಯರು ಈಗಿನ ಕಾಲದಲ್ಲಿ ಹಾಲುತುಪ್ಪಗಳನ್ನು ಬಂಗಾರದಂತೆ ಅಪ-ರೂಪವಾಗಿ ಕಾಣುತ್ತಾರೆ. ಹೀಗಾಗಿ ಜನರ ಆರೋಗ್ಯ ಸುಧಾರಿಸುವದಿಲ್ಲ. ಏಕೆಂದರೆ, ಮಾಂಸಾಹಾರಿಗಳಲ್ಲದ ಜನರಿಗೆ ಜೀವನಸತ್ವಗಳನ್ನು ಒದಗಿಸುವ ಮೂಲಗಳೆಂದರೆ ಹಾಲು ಮತ್ತು ಹಾಲಿನಿಂದಾದ ಜೀನಸುಗಳು. ಪಟ್ಟಣಗಳಲ್ಲಿ ಯಂತೂ ಹಾಲಿನ ಸಮಸ್ಯೆಯು ಜಟಿಲವಾಗಿದೆ. ಕೆಲ ಮಧ್ಯ ಗಾಮಿ ಗೌಳಿಜನರು ಇದರ ದುರುಪಯೋಗಮಾಡಿಕೊಳ್ಳು ವರು. ಹೇಗೆಂದರೆ, ಬೇಡಿಕೆ ಹೆಚ್ಚು ಇರುವದರಿಂದ ಹಾಲನ್ನು ಹೆಚ್ಚು ಬೆಲೆಗೆ ಮಾರುವರು. ಬೆಲೆ ಹೆಚ್ಚಿದ್ದರೂ ಶುದ್ಧ ಹಾಲು ಸಿಗುವದಿಲ್ಲ. ಸಾಮಾನ್ಯವಾಗಿ ಗೌಳಿ ಜನರು ಬಡತನದ ಭಾರ ದಿಂದ ಆಕಳು ಮತ್ತು ಎಮ್ಮೆಗಳಿಗೆ ಸಾಕಷ್ಟು ಮತ್ತು ಸರಿ ಯಾದ ಆಹಾರ ಹಾಕುತ್ತಿಲ್ಲ. ಹೀಗಾಗಿ ಹೈನದ ದನಗಳು ಬಹಳಷ್ಟು ಹಿಂಡುವದಿಲ್ಲ. ಅಲ್ಲದೆ ಬಹುಕಾಲ ಬಾಳುವದಿಲ್ಲ. ಅನಾರೋಗ್ಯಕರವಾದ ಸ್ಥಳದಲ್ಲಿ ದನಗಳನ್ನು ಕಟ್ಟಿ ದನಗಳ ಆರೋಗ್ಯ ಕೆಡುವ ಸಂಭವ ಬಹಳ ಮತ್ತು ಸುತ್ತು-ಮುತ್ತು ಪ್ರದೇಶವನ್ನು ಕೊಳೆಮಾಡುತ್ತಾರೆ. ಇವೆಲ್ಲ ಅಸಹ್ಯ ಸ್ಥಿತಿ ಗಳನ್ನು ಹೊಡೆದಟ್ಟಲು ಹೈನದ ಸಂಸ್ಥೆಗಳು ಅವಶ್ಯವೆನ್ನ ಬಹುದು. ಅಂತೂ ನಮ್ಮ ಪಂಚವಾರ್ಷಿಕ ಯೋಜನೆಗಳಲ್ಲಿ ಪಟ್ಟಣಗಳಲ್ಲಿ ದೊಡ್ಡ ಪ್ರಮಾಣದ ಸಂಘಗಳನ್ನು ತೆರೆಯುವ ವ್ಯವಸ್ಥೆ ಇದೆ. ೧ ಲಕ್ಷ ಜನಸಂಖ್ಯೆಇರುವ ಎಲ್ಲ ಶಹರಗಳಲ್ಲಿ ಇಂಥ ಸಂಘಗಳನ್ನು ತೆರೆಯುವ ನಿರೀಕ್ಷೆಯನ್ನು ಇಟ್ಟು ಕೊಂಡಿದೆ. ನಮ್ಮ ಮೂರನೆ ಪಂಚವಾರ್ಷಿಕ ಯೋಜನೆಯು.

ಇಂಥ ಸಂಸ್ಥೆಗಳು ಇನ್ನೂ ಸಾಕಷ್ಟು ಬೇಕು. ಇವುಗಳಿಂದ ಒಟ್ಟು ಹಾಲಿನ ಉತ್ಪಾದನೆ ಹೆಚ್ಚಿ, ಜನರಿಗೆ ಉತ್ತಮ ಹಾಲು ಸಿಗುವ ವ್ಯವಸ್ಥೆಯಾಗಬೇಕು. ಇದರ ಜೊತೆಗೆ ದನಗಳ ಆರೋಗ್ಯ ಸುಧಾರಿಸಿ, ಸದಸ್ಯರುಗಳ ಉತ್ಪನ್ನವನ್ನು ಹೆಚ್ಚಿಸುವ ಧ್ಯೇಯಗಳನ್ನು ಈ ಸಂಘಗಳು ಪೂರೈಸಿ ಕೊಡಲು ಯತ್ನಿಸಬೇಕು.

ಹೀಗೆ ಇನ್ನೂ ಅನೇಕ ಮಾದರಿಗಳನ್ನು ನೋಡಬಹುದು. ಅಂತೂ ಮೇಲಿನ ಕೆಲ ಉದಾಹರಣೆಗಳಿಂದ ಸಹಕಾರವು ರಾಷ್ಟ್ರದ ಬೆಳವಣಿಗೆಯಲ್ಲಿ ಬಹು ಮಹತ್ವದ ಪಾತ್ರವನ್ನು ವಹಿಸುವದೆಂದು ಕಂಡು ಬಂದಿದೆ. ಆದ್ದರಿಂದ ಸಹಕಾರಿ ಸಂಘಗಳನ್ನು ಸಮಾಜ ವಿಕಾಸ ಯೋಜನೆಯಲ್ಲಿ (Comnunity Development Programme) ಸೇರಿಸಿದ್ದಾಗಿದೆ. ಈಗ ಸರಕಾರವು ಸಹಿತ ಸಹಕಾರೀ ಸಂಸ್ಥೆಗಳನ್ನು ಬೆಳೆಸಲು, ಬಲವರ್ಧನೆಮಾಡಲು ಪರಿಶ್ರಮ ಮಾಡುತ್ತಿದೆ. ಸಹಕಾರಿ ಸಂಸ್ಥೆಗಳ ಬಂಡವಲದಲ್ಲಿ ಸರಕಾರವು ನೂರಕ್ಕೆ ೫೦ ರಷ್ಟು ಸಹಾಯ ಮಾಡುವದು. ಇದಲ್ಲದೆ ಸಹಕಾರಿ ಸಂಘಗಳಿಗೆ ಬೇಕಾಗುವ ಸೆಕ್ರೆಟರಿಗಳಿಗೆ ತರಬೇತಿ ಶಿಕ್ಷಣ ಕೇಂದ್ರಗಳನ್ನು ತೆರೆದಿದೆ. ಪ್ರತಿಯೊಂದು ಸಂಸ್ಥೆಗೆ ಕಾರ್ಯನಿರ್ವಹಣೆಗೆ ಅನುಕೂಲವಾಗುವಂತೆ ಕಾರ್ಯದರ್ಶಿಯ ವೇತನದ ಖರ್ಚಿನಲ್ಲಿ ಕೆಲವಷ್ಟು ಭಾಗ ಸಹಾಯಧನವನ್ನು (Grants) ಕೊಡುತ್ತದೆ. ಉಗ್ರಾಣಗಳನ್ನು ಕಟ್ಟಿಸಲು ಹಣ ಕೊಡುತ್ತದೆ. ತುರ್ತು ಪ್ರಸಂಗಗಳಲ್ಲಿ (emergencies)

ಸಹಾಯುವಾಗುವಂತೆ ರಾಷ್ಟ್ರೀಯು ಸಹಕಾರೀ ಭದ್ರತೆಯು ನಿಧಿ (National Co-operative Stabilization Funds ) ಎಂದು ತೆಗೆದಿರಿಸಲಾಗಿದೆ. ಇತ್ತಿತ್ತಲಾಗಿ ಸರಕಾರಿ ಅಧಿಕಾರಿಗಳ ವಿನಾಕಾರಣ ಹಸ್ತಕ್ಷೇಪವಾಗದಂತೆ ಸಹಕಾರಿ ಕಾಯುದೆಯುು ತಿದ್ದಲ್ಪಟ್ಟಿದೆ. ಸಹಕಾರವು ಜನರ ಕಾರ್ಯಕ್ರಮುವಾಗುವಂತೆ (Peoples Programme ) ಮಾಡುವ ಪ್ರಯುತ್ನಗಳು ನಡೆದಿವೆ. ಈ ಎಲ್ಲ ಗುರಿಗಳನ್ನು ಸಾಧಿಸಲು ಮತ್ತು ಸಹಕಾರದ ಅಭಿವೃದ್ಧಿ ಮಾಡಲು ಸರಕಾರವು ಮೊದಲನೆಯು ಪಂಚವಾರ್ಷಿಕ ಯೋಜನೆಯುಲ್ಲಿ ೭೦ ದಶಲಕ್ಷ ರೂಪಾಯಿಗಳನ್ನು ತೆಗೆದಿಟ್ಟಿತ್ತು. ಎರಡನೆಯು ಯೋಜನೆಯುಲ್ಲಿ ಸುಮಾರು ೪೯೦ ದಶಲಕ್ಷ ರೂಪಾಯಿಗಳನ್ನು ಮತ್ತು ಮೂರನೆಯು ಯೋಜನೆಯುಲ್ಲಿ ಸುಮಾರು ೮೦೦ ದಶಲಕ್ಷ ರೂಪಾಯಿಗಳನ್ನು ಕಾಯ್ದಿರಿಸಿತ್ತು. ನಾಲ್ಕನೆಯು ಯೋಜನೆಯುಲ್ಲಿ ಸುಮಾರು ೨೦೬೦ ದಶಲಕ್ಷ ರೂಪಾಯಿಗಳನ್ನು ತೊಡಗಿಸಬೇಕೆಂದು ನಿರ್ಧರಿಸಿದೆ.

ಇಷ್ಟೆಲ್ಲ ಪ್ರಯುತ್ನ ನಡೆದರೂ ಸಹಕಾರೀ ಆಂದೋಲನವು (ಇತ್ತಿತ್ತಲಾಗಿ 'ಆಂದೋಲನ' ಎಂಬ ಶಬ್ದದ ಬಳಕೆ ಕಡಿಮೆಯಾಗಿ ಸಹಕಾರೀ ಅಭಿವೃದ್ಧಿ ( Co-operative Development ) ಎಂದು ಉಪಯೋಗಿಸುತ್ತಿದ್ದಾರೆ) ಅನೇಕ ಕುಂದು – ಕೊರತೆಗೆ ಈಡಾಗಿದೆ. ಅದಕ್ಕೆ ಯೋಗ್ಯ ಮುಖಂಡರು ಇಲ್ಲವಾಗಿದೆ. ಕಾರ್ಯಕಾರಿ ಮಂಡಲ ಮತ್ತು ಸದಸ್ಯರುಗಳಲ್ಲಿಯು ಅಂತರ ಬೆಳೆಯುತ್ತಾ ನಡೆದಿದೆ.

ಸಾಕಷ್ಟು ಶಿಕ್ಷಣದ ಅರ್ಹತೆ ಇದ್ದವರು ಸಿಗದಂತಾಗಿದೆ. ಸಾಲ ಮತ್ತು ಮಾರಾಟಗಳ ಸಂಯೋಜನೆ ಅಷ್ಟು ಭದ್ರವಾಗಿಲ್ಲ. ಸಂಘಗಳ ವ್ಯವಸ್ಥಾಪಕ ಮಂಡಲದಲ್ಲಿ ವ್ಯವಹಾರಿಕ ಜ್ಞಾನ ( enterpreneurial capacity ) ಬೆಳೆದು ಬಂದಿಲ್ಲ. ಸದಸ್ಯರಿಗೆ ಸಹಕಾರತತ್ವ ಮತ್ತು ಕಾರ್ಯಕ್ಷೇತ್ರಗಳ ಬಗ್ಗೆ ಮಾಹಿತಿ ಸಾಕಷ್ಟು ಸಿಗದಂತಾಗಿದೆ. ಸ್ವಾರ್ಥ ಮತ್ತು ಇನ್ನೂ ಅನೇಕ ಗೊಂದಲಗಳಲ್ಲಿ "ಸಹಕಾರ" ಸಿಕ್ಕು ಕೊಳ್ಳುತ್ತಿದೆ. ಪಾಕ್ಷಿಕ ಹಸ್ತಕ್ಷೇಪ ( Party Politics )ವೂ ಕಂಡು ಬರುತ್ತದೆ. ಇನ್ನೂ ಅನೇಕ ದೋಷಗಳು ಸಿಗಬಹುದು.

ಇವೆಲ್ಲವುಗಳ ಪರಿಣಾಮವಾಗಿ ಸಹಕಾರಿ ಸಹಾಯ ಧನದ ಮತ್ತು ಸಾಲಗಳ ದುರುಪಯೋಗವಾಗತೊಡಗಿದೆ. ೧೯೬೨ರಲ್ಲಿ ಕೇಂದ್ರ ಸರಕಾರದ ಸಹಕಾರ ಮತ್ತು ಸಮಾಜಾಭಿವೃದ್ಧಿ ಮಂತ್ರಿಶಾಖೆಯ ಆದೇಶದಂತೆ ಯೋಜನಾ-ಆಯೋಗದಲ್ಲಿಯ-ಅಭಿವೃದ್ಧಿ ಯೋಜನೆಗಳ ಮೌಲ್ಯಮಾಪನ ಸಂಸ್ಥೆಯು(Programme Evaluation Organization) ಸಹಕಾರಿ ಸಾಲಗಳ ಸಾರ್ಥಕತೆಯನ್ನು ಕುರಿತು ಅಭ್ಯಾಸ ಮಾಡಿತು. ಆ ಮಾಹಿತಿಯನ್ನು ಇಲ್ಲಿ ನಾವು ಉಪಯೋಗಿಸಬಹುದು. ಉದಾಹರಣಾರ್ಥವಾಗಿ ಸಣ್ಣ ಪ್ರಮಾಣದ ಸಾಲಗಳು ನೂರಕ್ಕೆ ೪೨ ರಷ್ಟು ಅಕ್ರಮವಾಗಿ ( non-authorised use ) ಬಳಸಲ್ಪಟ್ಟಿವೆ. ಅದರಂತೆ ಮಧ್ಯಮತರಗತಿ ಸಾಲಗಳು ನೂರಕ್ಕೆ ೩೦ರಷ್ಟು ಅಕ್ರಮವಾಗಿ ಬಳಸಲ್ಪಟ್ಟಿವೆ; ಎಂದು ಕಂಡು ಬಂದಿದೆ. ಇವುಗಳ ಕಾರಣಗಳನ್ನು ನೋಡಿ

ದರೆ, ಸಣ್ಣ ಪ್ರಮಾಣದ ಸಾಲಗಾರರಲ್ಲಿ ನೂರಕ್ಕೆ ೭೨ರಷ್ಟು ಸದಸ್ಯರು ತಮ್ಮ ಮೂಢತನ (Ignorance) ವನ್ನು ವ್ಯಕ್ತ ಪಡಿಸಿದರು. ಅವರಿಗೆ ಸಾಲಗಳನ್ನು ಇಂತಿಂಥ ಕೆಲಸಗಳಿಗಾಗಿ ಉಪಯೋಗ ಮಾಡಬೇಕೆಂದು ತಿಳಿವಳಿಕೆ ಇರಲಿಲ್ಲ ಮತ್ತು ಯಾರೂ ಅವರಿಗೆ ದಾರಿ ತೋರಿಸಲಿಲ್ಲ. ಸಾಲವನ್ನು ಅನ್ಯ ಕಾರಣಗಳಿಗೆ ಉಪಯೋಗ ಮಾಡಲಾಗಿದ್ದುದನ್ನು ಸಹ ಕಂಡು ಹಿಡಿದಿದ್ದಾರೆ. ಸಣ್ಣ ಪ್ರಮಾಣದ ಸಾಲಗಳು (Short term loans) ಅನ್ಯ ಉಪಯೋಗವಾಗುವದಕ್ಕೆ ನೂರಕ್ಕೆ ೩೪ ರಷ್ಟು ಆರ್ಥಿಕ ಮುಗ್ಗಟ್ಟೇ ಕಾರಣ– ಅಂದರೆ ಲಗ್ನ ಮತ್ತು ಕೌಟುಂಬಿಕ ಅಡಚಣೆಗಳು ಎನ್ನಬಹುದು. ಮತ್ತೆ ನೂರಕ್ಕೆ ೩೫ರಷ್ಟು ಜನರು ಸಾಲಗಳನ್ನು ತಡವಾಗಿ ಹಂಚುವದು ಮತ್ತು ಅವುಗಳನ್ನು ಪಡೆಯುವದರಲ್ಲಿಯ ಅನಾನುಕೂಲತೆಗಳು ಇದಕ್ಕೆ ಕಾರಣವೆಂದು ಒಪ್ಪಿದರು. ದೊಡ್ಡ ಪ್ರಮಾಣದ (Long-term loans) ಸಾಲಗಳ ಅನ್ಯ ಉಪಯೋಗಕ್ಕೆ, ಕೌಟುಂಬಿಕ ಅಡಚಣೆ, ಮತ್ತು ಸಾಮಾಜಿಕ ಪ್ರಸಂಗಗಳು ಕಾರಣವೆಂದು ನೂರಕ್ಕೆ ೪೩ ಜನರು ತಿಳಿಸಿದರು. ಇವಲ್ಲದೆ, ಸಾಲಗಳ ವಿತರಣೆಯಲ್ಲಿ ವಿಲಂಬ (delay) ಮತ್ತು ಸಾಕಷ್ಟು ಸಾಲ (adequate) ಗಳನ್ನು ಕೊಡದೆ ಇರುವದು ಇವು ಉಳಿದ ಕಾರಣಗಳೆಂದು ಹೇಳಬಹುದು.

ಮೇಲ್ಕಾಣಿಸಿದ ಕುಂದುಕೊರತೆಗಳನ್ನು ನೀಗಿಸುವದೇ ಸಹಕಾರಿ ಪುನರುಜ್ಜೀವನದ ಗುರಿಯಾಗಬೇಕು. ಮುಖ್ಯ ವಾಗಿ ಹೇಳಬೇಕೆಂದರೆ, ಸಹಕಾರಿ ಸಂಘಗಳು ವ್ಯವಹಾರ

ಜ್ಞಾನ ಬಲಿಸಿಕೊಂಡು ಖಾಸಗಿ-ಸಂಸ್ಥೆಗಳಂತೆ ಸ್ಪರ್ಧಾತ್ಮಕ ಸಂಸ್ಥೆಗಳಾಗಬೇಕು. ಯೋಗ್ಯ ಮುಖಂಡರನ್ನು ಆರಿಸಿ ಕಾರ್ಯಕಾರಿ ಮಂಡಳ ಮತ್ತು ಸದಸ್ಯರುಗಳಲ್ಲಿಯು ಅಂತರ ಕಡಿಮೆಯಾಗುವಂತೆ ನೋಡಿಕೊಳ್ಳಬೇಕು. ಸದಸ್ಯರಿಗೆ ಸಹಕಾರದ ಪೂರ್ಣಜ್ಞಾನವಾಗುವಂತೆ ವ್ಯವಸ್ಥೆ ಮಾಡಬೇಕು. ಸಹಕಾರಿ ಸಂಸ್ಥೆಗಳ ಕಾರ್ಯಕಲಾಪಗಳಲ್ಲಿ ಯಾವುದೇ ಪಕ್ಷದ ಹಸ್ತಕ್ಷೇಪವಿರಕೂಡದು. ದೂಷಿತ ಭಾವನೆಗಳಿಗೆ ( Prejudiced ) ಎಡೆ ಇರಬಾರದು. ಸ್ವಹಿತ ಸಾಧಕರಿಗೆ ( Vested interests ) ಇಲ್ಲಿ ಸ್ಥಳವಿರದಂತೆ ಮಾಡಬೇಕು. ಸಹಕಾರಿ ಸಾಲಗಳ ದುರುಪಯೋಗವಾಗದಂತೆ ಮೇಲ್ವಿಚಾರಣೆಗೆ ಒಳಪಟ್ಟು ಸಾಲಗಳು ( Supervised Credit) ವಿತರಣೆಯಾಗಬೇಕು. ಅಂತೂ, ಸಹಕಾರದ ಅಭಿವೃದ್ಧಿಗೆ ಬೇಕಾಗುವ ಸಿಫಾರಸುಗಳನ್ನು ಇತ್ತಿತ್ತಲಾಗಿ ನೇಮಿಸಲಾದ ಮಿರ್ಧಾಕಮಿಟಿ ಮತ್ತು ದಾಂತವಾಲಾ ಕಮಿಟಿಗಳ ವರದಿಗಳಲ್ಲಿ ಸವಿಸ್ತಾರವಾಗಿ ಕಾಣಬಹುದು.

ಕೊನೆಯದಾಗಿ, ಸಹಕಾರವನ್ನು ಸಾಮಾಜಿಕ ಮತ್ತು ಆರ್ಥಿಕ ಅಂಗವೆಂದು ಜನರು ಭಾವಿಸಬೇಕು. ಅದೊಂದು ಪ್ರಜಾಸತ್ತೆಯ ಯೋಗ್ಯ ಮಾದರಿಯೆಂದು ಪ್ರೋತ್ಸಾಹಿಸಬೇಕು. ಸರಕಾರದ ಹೊಣೆಯೆಂದು ಜನರು ಸಹಕಾರಕ್ಕೆ ಉದಾಸೀನತೆ ತೋರಿಸಬಾರದು. ರಾಷ್ಟ್ರದ ಆರ್ಥಿಕಾಭಿವೃದ್ಧಿಯಲ್ಲಿ ಸಹಕಾರದ ಪಾತ್ರ ಬಹಳ ಮುಖ್ಯವಾಗಿರುವದರಿಂದ ಇಂಥ ಪದ್ಧತಿಯನ್ನು ಜನರು ಅಳವಡಿಸಿ ಆಚರಣೆಯಲ್ಲಿ ತರ

ಬೇಕು. ಈ ಮೊದಲೇ ಹೇಳಿದಂತೆ, ಆರ್ಥಿಕ ಯೋಜನೆಗೆ ಬೇಕಾಗುವ ಹಣದ ಮುಗ್ಗಟ್ಟನ್ನು ಪರಿಹರಿಸಲು ಸರಕಾರಿ ರಂಗ ಮತ್ತು ಖಾಸಗಿ ರಂಗಗಳ ಜೊತೆಗೆ ಸಹಕಾರಿ ರಂಗವೂ ಮುಂದೆ ಬರಬೇಕು. ಈ ಎಲ್ಲ ರಂಗಗಳ(ಕ್ಷೇತ್ರಗಳ)ಪರಸ್ಪರ ಬೆಳವಣಿಗೆ ಪರಸ್ಪರ ಅನುಕೂಲಕ್ಕಾಗಿ ಇದ್ದು ರಾಷ್ಟ್ರದ ಅಭಿವೃದ್ಧಿಯನ್ನು ಸಾಧಿಸಲು ಯಾವತ್ತೂ ಕ್ಷೇತ್ರಗಳೂ ಪರಿಶ್ರಮಿಸಬೇಕು.

## ೩. ಪಂಚಾಯತಿ ರಾಜ್ಯ

'ಪಂಚಾಯತಿ ರಾಜ್ಯ'ವೆಂಬುದು ಇತ್ತೀಚಿನ ಪ್ರಯೋಗವಾದರೂ ಅದರ ಹಿನ್ನೆಲೆಯು ನೂರಾರು ವರ್ಷಗಳಿಂದ ಇಳಿದು ಬಂದಿದೆ ಎನ್ನಬಹುದು. ಗ್ರಾಮಾಡಳಿತದ ಇತಿಹಾಸವನ್ನು ನಾವು ಆರು ಭಾಗಗಳಾಗಿ ವಿಂಗಡಿಸಬಹುದು :— (೧) ಪುರಾತನ ಕಾಲ (೨) ಮಧ್ಯಯುಗ– ಅಂದರೆ ಪರಕೀಯರ ದಬ್ಬಾಳಿಕೆ ಸುರುವಾದಂದಿನಿಂದ ೧೮೮೨ರ ವರೆಗೆ, (೩) ೧೮೮೨–೧೯೧೯, (೪) ೧೯೧೯ರಿಂದ ೧೯೪೭, (೫) ೧೯೪೭–೧೯೫೯, (೬) ೧೯೫೯ ರಿಂದ ಇತ್ತೀಚೆಗೆ ಹೀಗೆ ವಿಭಜಿಸಿ ಹೇಳಬಹುದು.

(೧) **ಪುರಾತನ ಕಾಲ :** ವೇದಿಕ ಸಮಯದಲ್ಲಿ 'ಸಭಾ' 'ಸಮಿತಿ' ಗಳೆಂದು ಗ್ರಾಮಗಳ ಆಡಳಿತವನ್ನು ನೋಡುತ್ತಿದ್ದರೆ, ಮೌರ್ಯರ ಕಾಲದಲ್ಲಿ 'ಗಣ' ಗಳೆಂದು ಹೆಸರು ಇತ್ತು. ಮುಂದೆ ಮಹಾಭಾರತದ ಕಾಲಕ್ಕೆ 'ಗ್ರಾಮಸಂಘ' ಗಳೆಂದು ಕರೆಯಲ್ಪಟ್ಟವು. 'ಜಾತಕ' ಕಥೆಗಳಲ್ಲಿಯೂ 'ಗ್ರಾಮ ಸಭೆ' ಗಳೆಂಬ ಪದಗಳನ್ನು ನಾವು ಕಾಣಬಹುದು. ಅಂತೂ ಹಳ್ಳಿಗಳ ಆಡಳಿತವನ್ನು ಈ ಪ್ರಕಾರದ ಸಂಸ್ಥೆಗಳು ಸುವ್ಯವಸ್ಥೆಯಿಂದ ನಡೆಸುತ್ತಿದ್ದವು. ಅವುಗಳಿಂದಲೇ ನಮ್ಮ ಪೂರ್ವಸಂಸ್ಕೃತಿಯು ಬೆಳೆದು ಬಂದಿತ್ತು. ಗ್ರಾಮಗಳಲ್ಲಿಯ ಶಿಸ್ತು-ಶಾಂತತೆ ಕಾಯ್ದುಕೊಂಡು, ಶೈಕ್ಷಣಿಕ ಪ್ರಗತಿಗೆ ಮತ್ತು ಸಾರ್ವಜನಿಕ ಹಿತ

ಕ್ಕಾಗಿ ಹೆಣಗುತ್ತಿದ್ದವು. ರಸ್ತೆ, ಕುಡಿಯುವ ನೀರಿನ ವ್ಯವಸ್ಥೆ, ಮತ್ತು ಸಾರ್ವಜನಿಕ ಕಟ್ಟಡಗಳನ್ನು ಕಟ್ಟಿಸು ತ್ತಿದ್ದವು. ಈ ಎಲ್ಲ ಕಾರ್ಯಗಳನ್ನು ನಿರ್ವಹಿಸಲು ಬೇಕಾಗುವ ಹಣದ ಸಲುವಾಗಿ ಭೂಮಿಯ ಉತ್ಪನ್ನದಲ್ಲಿ ಕೆಲ ಭಾಗವನ್ನು ಪಡೆಯುತ್ತಿದ್ದವು. ಅಂತೂ ಎಲ್ಲ ದೃಷ್ಟಿಯಿಂದ ಹಳ್ಳಿಗಳು ಸ್ವಾವಲಂಬಿಯಾಗಿದ್ದವು.

(೨) **ಮಧ್ಯಯುಗ :—** ಪರಕೀಯರ ದಾಳಿ ಯಿಂದ ಹಳ್ಳಿಗಳ ಆಡಳಿತಕ್ಕೆ ಬಲು ಧಕ್ಕೆ ತಗುಲಿತು. ಮೊಗಲರ ಕಾಲದಲ್ಲಿ ಪೌರಾಡಳಿತದ ಮಹತ್ವ ಬಹಳೇ ಕಡಿಮೆ ಯಾಯಿತು. ಅಲ್ಲದೆ ಬ್ರಿಟಿಶರು ಬರುವದರೊಳಗಾಗಿ ಗ್ರಾಮ ಸಭೆ ಮತ್ತು ಸಂಘಗಳಲ್ಲಿ ವಿಷಮ ವಾತಾವರಣ ಹುಟ್ಟಿ, ಒಳಜಗಳಗಳಿಗೆ ಆಸ್ಪದ ಒದಗಿತ್ತು. ಬ್ರಿಟಿಶರ ಆಳಿಕೆಯಿಂದ ಅಂಥದಕ್ಕೆ ಪುಟ ಕೊಡುವಂತೆ ವಸಾಹತುಗಾರಿಕೆಯ (Colonialism) ಪ್ರಭಾವವೂ ತಲೆಎತ್ತಿತು. ಹೀಗಾಗಿ, ಗ್ರಾಮ ಆಡಳಿತದ ಅಂಗಗಳು ಬಲು ಹೀನಸ್ಥಿತಿಯಲ್ಲಿದ್ದ ವೆನ್ನಬಹುದು.

(೩) **೧೮೮೨ – ೧೯೧೯ :—** ಈ ಸಮಯದಲ್ಲಿ ಲಾರ್ಡ ರಿಪನ್ನನು ೧೮೮೨ರಲ್ಲಿ ಸ್ಥಾನಿಕ ಸಂಸ್ಥೆಗಳನ್ನು ಸುಧಾರಿಸುವ ಪದ್ಧತಿಯನ್ನು ಜಾರಿಗೆ ತಂದನು. ಆದರೂ ಅದಕ್ಕೆ ಜನರ ಬೆಂಬಲ ಸಿಗದಿದ್ದರಿಂದ ಬಹು ಕಾಲದ ವರೆಗೆ ಅಂದರೆ ೧೯೦೭ ರಲ್ಲಿ ರಾಯಲ್ ಕಮೀಶನ್ ಆನ್ ಡಿಸೆಂಟ್ರ

ಲಾಯುಜೇಶನ್ ಪಂಚಾಯುತಿಗಳ ಪುನರುಜ್ಜೀವನದ ಬಗ್ಗೆ ಸಿಫಾರಸು ಮಾಡುವತನಕ, ರಿಪನ್ನನ ಯತ್ನವು ಫಲಕಾರಿಯಾಗಲಿಲ್ಲ. ರಾಯುಲ ಕಮೀಶನ್ನು ಆಡಳಿತ ವಿಕೇಂದ್ರೀಕರಣಕ್ಕೆ, ಗ್ರಾಮಾಡಳಿತಕ್ಕೆ ಪಂಚಾಯುತಿಗಳು ಅತ್ಯವಶ್ಯ, ಅವುಗಳನ್ನು ಪ್ರೋತ್ಸಾಹಿಸಬೇಕು ಎಂದಿತು. ಅದರಂತೆ ೧೯೧೨ ರಲ್ಲಿ ಆಗಿನ ಸರಕಾರವು ಒಂದು ಪಂಚಾಯುತಯೋಜನೆಯನ್ನು ಪುಷ್ಟೀಕರಿಸುವ ಯೋಜನೆ (Pilot project to revitalise Panchayats) ಎಂಬ ಪ್ರಯೋಗವನ್ನು ಕೈಕೊಂಡಿತು. ಈ ಪ್ರಯೋಗವೂ ಜನಸಾಮಾನ್ಯರ ಉದಾಸೀನತೆ ಮತ್ತು ಅಸಹಕಾರಗಳಿಂದಾಗಿ ಅಷ್ಟೊಂದು ಪ್ರಯೋಜನಕ್ಕೆ ಬರಲಿಲ್ಲ.

(೪) ೧೯೧೯ - ೧೯೪೭ :— ೧೯೧೯ರಿಂದ ಸ್ಥಾನಿಕ ಸ್ವರಾಜ್ಯವು ವರ್ಗಾಯಿತ ವಿಷಯು "transferred subject" ಎಂದು ಬದಲಿಸಲ್ಪಟ್ಟಿತು. ಮುಂದೆ ೧೯೩೫ ರ 'ಪ್ರಾಂತೀಯ ಸರಕಾರ' ಗಳು ಪಂಚಾಯುತಿಗಳಿಗೆ ಸಾಕಷ್ಟು ಅನುಕೂಲತೆ ಒದಗಿಸಿಕೊಟ್ಟವು. ಆದರೂ ಅವುಗಳ ಬೆಳವಣಿಗೆ ಆಶಾದಾಯಕವಾಗಿ ಮತ್ತು ಪರಿಣಾಮಕಾರಿಯಾಗಿ ಮಾರ್ಪಡಲಿಲ್ಲ.

(೫) ೧೯೪೭ - ೧೯೫೯ :— ಭಾರತಕ್ಕೆ ಸ್ವಾತಂತ್ರ್ಯ ಸಿಕ್ಕಂದಿನಿಂದ ಸಂವಿಧಾನದ ಪ್ರಕಾರ (Constitution of India) ಗ್ರಾಮ ಪಂಚಾಯುತಿಗಳಿಗೆ ವಿಶಿಷ್ಟರೂಪ ಮತ್ತು ಯೌವನ ಬಂದವೆನ್ನಬಹುದು. ಸರಕಾರವು ಹೊಸ ಹೊಸ ಪಂಚಾಯುತಿಗಳನ್ನು ಸ್ಥಾಪಿಸಲು ಪ್ರಾರಂಭಿಸಿತು ಮತ್ತು ಅವುಗಳನ್ನು ಸ್ಥಾನಿಕ ಆಡಳಿತದ ಅಂಗಗಳನ್ನಾಗಿ ಮಾರ್ಪಡಿಸ

ಹತ್ತಿತು. ಪಂಚವಾರ್ಷಿಕ ಯೋಜನೆಗಳು ಸುರುವಾದಂದಿನಿಂದ, ಈ ಸ್ಥಾನಿಕ ಸಂಸ್ಥೆಗಳು ರಾಷ್ಟ್ರದ ಅಭಿವೃದ್ಧಿ ಕಾರ್ಯಗಳಲ್ಲಿ ತತ್ಪರವಾಗುವಂತೆ ಅನುಕೂಲ ಪರಿಸ್ಥಿತಿ ಉಂಟಾಯಿತು. ಪಂಚವಾರ್ಷಿಕ ಯೋಜನೆಯಲ್ಲಿ ಪಂಚಾಯತಗಳಿಗೆ ಬಹಳ ಮಹತ್ವ ಕೊಡಲಾಗಿದೆ ಹಾಗೂ ಹಳ್ಳಿಗಳ ಆಡಳಿತ ವಿಭಾಗಕ್ಕೆ ತನ್ನದೇ ಆದ ಅತ್ಯವಶ್ಯಕ ಘಟಕವಾಗಿ ಎಲ್ಲ ಸಮಾಜದ ಪ್ರಾತಿನಿಧ್ಯವನ್ನು ಹೊಂದಿ ಸರ್ವಾಂಗ ಸುಂದರವಾಗಲು ತನ್ನದೇ ಅಸ್ತಿತ್ವ ಹೊಂದಲು ಕಲ್ಪಿಸಿದೆ. ಪಂಚಾಯತಿಗಳು ಹೇರಳವಾಗಿ ಅಸ್ತಿತ್ವದಲ್ಲಿ ಬಂದವು. ಉದಾಹರಣಾರ್ಥ, ೧೯೫೦-೫೧ ರಲ್ಲಿ ೮೩,೦೯೩ ಪಂಚಾಯತಿಗಳಿದ್ದರೆ, ೧೯೫೬ರಲ್ಲಿ ಅವುಗಳ ಸಂಖ್ಯೆ ೧,೨೩,೬೭೦ ಕ್ಕೆ ಏರಿತು. ಆದರೂ ಸಹಿತ ಸ್ಥಾನಿಕ ಸಂಸ್ಥೆಗಳ ಕಾರ್ಯಭಾರವು ತೃಪ್ತಿಕರವಾಗಿಲ್ಲವೆಂದು ೧೯೫೭ ರಲ್ಲಿ ಮೇಹತಾ ಕಮಿಟಿಯು ವರದಿ ಒಪ್ಪಿಸಿತು. ಅಂದರೆ ಒಟ್ಟು ಪಂಚಾಯತಿಗಳ ನೂರಕ್ಕೆ ೧೦ ರಷ್ಟು ತೃಪ್ತಿಕರವಾಗಿ ಕೆಲಸ ಮಾಡುತ್ತಿವೆ, ನೂರಕ್ಕೆ ೫೦ ರಷ್ಟು ಸಾಮಾನ್ಯಮಟ್ಟದಲ್ಲಿವೆ, ಉಳಿದ ೪೦ ರಷ್ಟು ಆತೃಪ್ತಿಕರವಾಗಿ ಕಾರ್ಯ ನಿರ್ವಹಿಸುತ್ತವೆ ಎಂದು ಕಂಡು ಹಿಡಿಯಿತು. ಅದೇ ಕಮಿಟಿಯು ಪಂಚಾಯತಿಗಳ ಪುನರುಜ್ಜೀವನಕ್ಕಾಗಿ ಕೆಲವು ಸಿಫಾರಸುಗಳನ್ನು ಮಾಡಿತು. ಅವುಗಳಲ್ಲಿ (Three tier system) ಮೂರು ಹಂತಗಳ ಆಡಳಿತದ ಸುಧಾರಣೆಯು ಒಂದಾಗಿದೆ.

(೬) ೧೯೫೯ರಿಂದ ಇತ್ತೀಚಿಗೆ:— ಈ ಮೂರು ಹಂತದ ಸ್ಥಾನಿಕ ಆಡಳಿತಕ್ಕೆ 'ಪಂಚಾಯತಿ ರಾಜ್ಯ' ವೆಂದು

ಸರಕಾರವು ಘೋಷಿಸಿತು. ಅದು ಹೇಗೆಂದರೆ ೧ನೇ ಹಂತದಲ್ಲಿ, ಹಳ್ಳಿಗಳಲ್ಲಿ ಗ್ರಾಮಪಂಚಾಯತಿ ಇರಬೇಕು. ೨ನೇ ಹಂತದಲ್ಲಿ ಅಂದರೆ ಬ್ಲಾಕ್ ಲೆವಲ್ ಅಥವಾ ತಾಲೂಕಿನ ಮಟ್ಟದಲ್ಲಿ 'ಪಂಚಾಯತ ಸಮಿತಿ' ಮತ್ತು ಕೊನೆಯ ಮಟ್ಟದಲ್ಲಿ ಅಂದರೆ ಜಿಲ್ಲಾ ಮಟ್ಟದಲ್ಲಿ 'ಜಿಲ್ಲಾ ಪರಿಷದ್' ಇರಬೇಕೆಂದು ನಿರ್ಣಯಿಸಲ್ಪಟ್ಟಿದೆ. ಈ ಮೂರೂ ಹಂತಗಳು ಪರಸ್ಪರ ಅವಲಂಬಿಸಿ, ಒಟ್ಟಾಗಿ ಕೆಲಸಮಾಡಬೇಕು ಎಂಬುದೇ ಇದರ ಗುರಿ. ಈ ಸಿಫಾರಸಿನ ಪ್ರಕಾರ ಜಿಲ್ಲಾ ಪರಿಷತ್ತು ಕೇವಲ ಮೇಲ್ವಿಚಾರಕ ಅಂದರೆ ಯಾವದೇ ಕಾರ್ಯನಿರ್ವಹಿಸುವಂತಿಲ್ಲ. ಆದರೂ ಈ ಪದ್ಧತಿಯು ಎಲ್ಲ ಪ್ರಾಂತಗಳಲ್ಲಿ ಬಳಕೆಯಲ್ಲಿ ಬಂದಿದೆ. ಮಹಾರಾಷ್ಟ್ರದಲ್ಲಿ ಮಾತ್ರ ಜಿಲ್ಲಾ ಪರಿಷತ್ತಿಗೆ ಪ್ರಾಧಾನ್ಯವಿದೆ. ಅವುಗಳಿಗೆ ಸಾಕಷ್ಟು ಅಧಿಕಾರಗಳಿವೆ. ಯೋಜನೆ ಹಾಗೂ ಅಭಿವೃದ್ಧಿಯ ಹಾಗೂ ರಾಜ್ಯ ಸರಕಾರಕ್ಕೆ ಸಲಹೆ ಕೊಡುವ ಅಧಿಕಾರವೂ ಇದೆ. ಕಾರ್ಯನಿರ್ವಹಣೆಯು ಇತ್ತೀಚಿಗೆ ಪಂಜಾಬದಲ್ಲಿಯ ಸ್ಥಾನಿಕ ಸಂಸ್ಥೆಗಳ ಆಡಳಿತವನ್ನು ಅಭ್ಯಸಿಸಲು ನೇಮಕ ಮಾಡಿದ ಒಂದು ಆಯೋಗವೂ ಸಹಿತ ಮಹಾರಾಷ್ಟ್ರದಲ್ಲಿಯಂತೆ - ಜಿಲ್ಲಾ ಪರಿಷತ್ತುಗಳಿಗೆ ಹೆಚ್ಚಿನ ಸ್ಥಾನ ಕೊಡುವದು ಒಳ್ಳೆಯದು ಎಂದು ಸಿಫಾರಸು ಮಾಡಿದೆ. ಮೈಸೂರ ರಾಜ್ಯದಲ್ಲಿಯೂ ಸಹಿತ ಜಿಲ್ಲಾ ಪರಿಷತ್ತುಗಳನ್ನು ಪುನರ್ಘಟಿಸಿ ಮಹಾರಾಷ್ಟ್ರದಂತೆ ಅವುಗಳಿಗೆ ಸ್ಥಾನಮಾನ ಕೊಡಬೇಕೆಂದು ಕೊಂಡಜ್ಜಿ ಬಸಪ್ಪನವರ ಸಮಿತಿ ವರದಿ ಮಾಡಿದ್ದಾಗಿದೆ. ಅಂತೂ ೧೯೬೭ರ ಮಾರ್ಚದ ಕೊನೆಗೆ ರಾಷ್ಟ್ರದಲ್ಲಿ ೨೦೫೪೫೨ ಪಂಚಾ

ಯತಿಗಳಿವು ೫ಲಕ್ಷ ೨೦ಸಾವಿರ ಹಳ್ಳಿಗಳನ್ನು ಆವರಿಸಿವೆ. ಸಾಮಾನ್ಯವಾಗಿ ಪ್ರತಿ ಎರಡು ಹಳ್ಳಿಗಳಿಗೆ ಒಂದು ಪಂಚಾಯತಿ ಇದೆ.

ಪಂಚಾಯತಿ ರಾಜ್ಯದ ಧ್ಯೇಯ ಮತ್ತು ಧೋರಣೆಗಳನ್ನು ನಾವು ಮೂರು ಪ್ರಕಾರವಾಗಿ ವಿಂಗಡಿಸಬಹುದು.

(೧) ಪಂಚಾಯತಿ ರಾಜ್ಯವು ವ್ಯಕ್ತಿ ಮತ್ತು ಸಮಾಜಗಳ ಸಂಬಂಧವನ್ನು ತನ್ನ ಸಮಾಜದ ಸ್ವಆಡಳಿತದ ಮುಖಾಂತರ ಭದ್ರಗೊಳಿಸುತ್ತದೆ. ಆದರಂತೆ ಸಾಮಾಜಿಕ ಕಾರ್ಯಕ್ಷೇತ್ರದಲ್ಲಿ ಭಾಗವಹಿಸುವಂತೆ ಪ್ರತಿಯೊಬ್ಬ ವ್ಯಕ್ತಿಯನ್ನು ಪ್ರೇರೇಪಿಸುತ್ತದೆ ಮತ್ತು ಅವನಿಗೆ ರಾಜಕೀಯ ಶಿಕ್ಷಣ (Political education) ದಲ್ಲಿ ಆಸಕ್ತಿಯನ್ನು ಹುಟ್ಟಿಸಿ ಪೂರ್ಣನಾಗರಿಕನಾಗುವಂತೆ ಪ್ರಯತ್ನಿಸುತ್ತಿದೆ. ಆದ್ದರಿಂದ ಪಂಚಾಯತಿ ರಾಜ್ಯವು ವ್ಯಕ್ತಿ ಮತ್ತು ಸಮಾಜಗಳಲ್ಲಿಯ ಅಂತರವನ್ನು ಕಡಿಮೆ ಮಾಡುವದಲ್ಲದೆ ಇದು ವ್ಯಕ್ತಿಗೆ ಸಾಮಾಜಿಕ ಮತ್ತು ರಾಜಕೀಯ ಕ್ಷೇತ್ರಗಳಲ್ಲಿ ಆಸ್ಪದಕೊಟ್ಟು ಅವನನ್ನು ನಿಜವಾದ ನಾಗರಿಕನನ್ನಾಗಿ ಮಾಡುವ ಒಂದು ಸಾಧನವೆನ್ನಬಹುದು.

(೨) ಪಂಚಾಯತಿ ರಾಜ್ಯದಿಂದ ರಾಜ್ಯ ಮತ್ತು ಕೇಂದ್ರ ಸರಕಾರಗಳಿಗೆ ಆಡಳಿತ ಕ್ಷೇತ್ರದಲ್ಲಿ ಪ್ರೋತ್ಸಾಹ ಸಿಗುತ್ತದೆ. ಅಲ್ಲದೆ, ಯೋಜಿತ ಆರ್ಥಿಕ ವ್ಯವಸ್ಥೆಯಿಂದ (Planned economy) ಮುನ್ನುಗ್ಗುವ ಕಲ್ಯಾಣಕಾರಕ ಸರಕಾರಕ್ಕೆ (Welfare Government) ತನ್ನ ಅನೇಕ ಅಭಿವೃದ್ಧಿ ಕಾರ್ಯಗಳನ್ನೂ ಮತ್ತು ಆಡಳಿತದ ಭಾರವನ್ನೂ ನಿರ್ವಹಿಸು

ವದಕ್ಕೆ ಪಂಚಾಯುತಿ ರಾಜ್ಯವು ಆಡಳಿತದ ಸೂತ್ರಗಳನ್ನು ದೃಢಪಡಿಸಿರುತ್ತದೆ ಮತ್ತು ಆಡಳಿತಕ್ಕೆ ಅನುಕೂಲ ಪರಿಸ್ಥಿತಿ ಉಂಟುಮಾಡುತ್ತದೆ. ಆದ್ದರಿಂದ ಪಂಚಾಯುತಿ ರಾಜ್ಯವು ಸ್ಥಾನಿಕ ಸಂಸ್ಥೆಗಳ ಮುಖಾಂತರ ಆಡಳಿತವನ್ನು ಬಲವತ್ತರವಾಗಿ ಮಾಡುವ ಮತ್ತು ಅಭಿವೃದ್ಧಿ ಕಾರ್ಯಗಳಿಗೆ ತೀವ್ರಗತಿಯನ್ನು ಕೊಡುವ ಒಂದು ಪದ್ಧತಿ( System ) ಎನ್ನಬಹುದು.
(೩) ಪಂಚಾಯುತಿ ರಾಜ್ಯವು ಜನರಿಗೆ ಸ್ವಂತ ಆಡಳಿತದ ಅಧಿಕಾರವನ್ನು ಕೊಡುತ್ತದೆ. ಇದರಿಂದ ಜನರೂ ಸಹ ಒಟ್ಟು ಆಡಳಿತದ ಹೊಣೆಯನ್ನು ಹೊತ್ತುಕೊಂಡು ಹೋಗಲಿಕ್ಕೆ ಅನುವು ಮಾಡಿ ಕೊಡುತ್ತದೆ. ಇದರಿಂದ ಎರಡು ಉದ್ದೇಶಗಳು ಈಡೇರುತ್ತವೆ. ಮೊದಲನೆಯದಾಗಿ, ಆರ್ಥಿಕಾಭಿವೃದ್ಧಿಯ ಕಾಲಕ್ಕೆ ಬೆಳೆದ ರಾಜ್ಯದ ಹೊಣೆಗಾರಿಕೆಯನ್ನು ಹೊತ್ತುಕೊಂಡು ಹೋಗಲು ಬೇಕಾಗುವ ಆಡಳಿತಗಾರರನ್ನು ಸರಕಾರವು ಪಡೆಯುತ್ತಿದೆ. ಎರಡನೆಯದಾಗಿ, ರಾಜಕೀಯ ಪಕ್ಷದ ಪ್ರಭಾವವನ್ನು ಗ್ರಾಮ-ಮಟ್ಟದಲ್ಲಿಯೂ ಬೀರುವಂತೆ ಅನುಕೂಲ ವಾತಾವರಣ ಹುಟ್ಟುತ್ತದೆ. ಅಂತೂ, ಪಂಚಾಯುತಿ ರಾಜ್ಯವು ರಾಜಕೀಯ ಪಕ್ಷದ ಪ್ರಭಾವವನ್ನು ಬೀರಿ ಆ ಪಕ್ಷದ ಹಿಡಿತವನ್ನು ಬಲಪಡಿಸುವಂಥ ಮತ್ತು ಆಡಳಿತದಲ್ಲಿಯ ಕುಂದು-ಕೊರತೆಗಳಿಗೆ ಜನರೇ ಹೊಣೆಗಾರಿಕರಾಗುವಂತೆ ನೋಡಿಕೊಳ್ಳುವ ಒಂದು ಸೂತ್ರವೆನ್ನಬಹುದು.

ಪಂಚಾಯುತಿ ರಾಜ್ಯದ ತತ್ತ್ವ ( Principles ) ಗಳನ್ನು ಕೆಳಗಿನಂತೆ ವಿವರಣೆ ಮಾಡಬಹುದು:

(೧) ಈ ಪ್ರಕಾರದ ಆಡಳಿತದ ವ್ಯವಸ್ಥೆಯು ಮೂರು ಹಂತಗಳನ್ನು ಆವರಿಸಿ ಗ್ರಾಮ, ತಾಲೂಕಾ, ಪೇಠಾ ಮತ್ತು ಜಿಲ್ಲಾ ಸ್ಥಾನಿಕ ರಾಜ್ಯ ವ್ಯವಸ್ಥೆಯನ್ನು ಸುಧಾರಿಸುವಂತೆ ನೋಡಿಕೊಳ್ಳುತ್ತದೆ. ಈ ಎಲ್ಲ ಹಂತಗಳೂ ಪರಸ್ಪರ ಹೊಂದಾಣಿಕೆಯಾಗುವಂತೆ ಜೋಡಿಸಲ್ಪಡಬೇಕು.

(೨) ಅಧಿಕಾರ ಮತ್ತು ಹೊಣೆಗಾರಿಕೆಗಳ ನಿಜವಾದ ವಿತರಣೆಯಾಗಬೇಕು. ಅಂದರೆ ಅಧಿಕಾರ ಮತ್ತು ಹೊಣೆಗಾರಿಕೆ ಕೇಂದ್ರೀಕರಣವಾಗದಂತೆ ನೋಡಿಕೊಳ್ಳಬೇಕು.

(೩) ಸಾಕಷ್ಟು ಆರ್ಥಿಕ ಬೆಂಬಲ ಮತ್ತು ಹಣದ ಪೂರೈಕೆಯು ಪಂಚಾಯತಿಗಳಿಗೆ ದೊರೆತು ಅವು ತಮ್ಮ ಹೊಣೆಗಾರಿಕೆ ಮತ್ತು ಕೆಲಸಗಳನ್ನು ನೀಗಿಸುವಂತೆ ತೃಪ್ತಿಕರವಾಗಿರಬೇಕು.

(೪) ಈ ಎಲ್ಲ ಮಟ್ಟಗಳಲ್ಲಿ ಗೊತ್ತುಪಡಿಸಿದ ಅಭಿವೃದ್ಧಿಕಾರ್ಯಗಳೆಲ್ಲವೂ ಈ ಬೇರೆ ಬೇರೆ ಪ್ರಕಾರದ ಪಂಚಾಯತಿ ರಾಜ್ಯದ ಮೂರು ಅಂಗಗಳಿಂದಲೇ ನಿರ್ವಹಿಸುವ ವ್ಯವಸ್ಥೆಯಾಗಬೇಕು. ಅಂದರೆ ಗ್ರಾಮಗಳಲ್ಲಿ ಪಂಚಾಯತಿಗಳು ಮತ್ತು ಬ್ಲಾಕ ಮಟ್ಟದಲ್ಲಿ ಪಂಚಾಯತ ಸಮಿತಿ ಅಥವಾ ತಾಲೂಕಾಭಿವೃದ್ಧಿ ಮಂಡಳಗಳು ಎಲ್ಲ ಅಭಿವೃದ್ಧಿ ಕಾರ್ಯಕ್ರಮಗಳಿಗೆ ಹೊಣೆಯಾಗಿರಬೇಕು.

(೫) ಈ ಪಂಚಾಯತಿ ರಾಜ್ಯದ ವ್ಯವಸ್ಥೆಯು ಮುಂದಾವರೂ ಅಧಿಕಾರ ಮತ್ತು ಹೊಣೆಗಾರಿಕೆಗಳ ವಿಸ್ತರಣೆ ಮತ್ತು ವಿತರಣೆಯಾಗುವಂತೆ ಅನುಕೂಲ ಪರಿಸ್ಥಿತಿಯನ್ನು

ಉಂಟು ಮಾಡಬೇಕು. ಅಂದರೆ ಅಧಿಕಾರಿಗಳ ಸರಿಯಾದ ಉಪಯೋಗಮಾಡಿ ಜನತೆಯಲ್ಲಿ ಪ್ರಭಾವ ಮತ್ತು ಪ್ರೀತಿಯನ್ನು ಗಳಿಸಬೇಕು. ಅಲ್ಲದೆ ಹೊಣೆಗಾರಿಕೆಗಳನ್ನು ಜನರ ಕಲ್ಯಾಣವಾಗುವಂತೆ ಕೃತಿಯಲ್ಲಿಳಿಸಿ ಜನರ ಬೆಂಬಲ ಪಡೆಯಬೇಕು. ಹೀಗೆ, ಪಂಚಾಯತಿರಾಜ್ಯವು ಬೆಳೆದು ಬಲವಂತವಾಗುವಂತೆ ನೋಡಿಕೊಳ್ಳಬೇಕು.

ಪಂಚಾಯತಿ ರಾಜ್ಯದ ರಚನೆಯು ಮೊದಲು ಹೇಳಿದಂತೆ ಗ್ರಾಮಪಂಚಾಯತಿ, ಪಂಚಾಯತ ಸಮಿತಿ (ತಾಲೂಕಾ ಅಥವಾ ಬ್ಲಾಕ ಸಮಿತಿ) ಮತ್ತು ಜಿಲ್ಲಾ ಪರಿಷತ್ತುಗಳನ್ನು ಆವರಿಸಿದೆ. ಪ್ರತಿಯೊಂದು ಹಳ್ಳಿಯಲ್ಲಿ ಜನಸಂಖ್ಯೆಯ ಪ್ರಮಾಣದ ಮೇಲೆ ಜನರು ತಮ್ಮ ಪ್ರತಿನಿಧಿಗಳನ್ನು ಆರಿಸಿ ಕೊಡುವರು. ಈ ಪ್ರತಿನಿಧಿಗಳು ತಮ್ಮ ಕಾರ್ಯವಾಹಕ ಮಂಡಲಿ ರಚಿಸಿ ಅದಕ್ಕೆ ಒಬ್ಬ ಸರಪಂಚ ಅಥವಾ ಮುಖ್ಯಸ್ಥನನ್ನು ಆರಿಸುತ್ತಾರೆ. ಹೀಗೆ ಹಳ್ಳಿಯಲ್ಲಿ ಗ್ರಾಮಪಂಚಾಯತಿ ನಿರ್ಮಾಣವಾಗುವದು. ಇನ್ನು ತಾಲೂಕಾಮಟ್ಟದಲ್ಲಿ ಇಲ್ಲವೆ ಬ್ಲಾಕ್ ಮಟ್ಟದಲ್ಲಿ ಪಂಚಾಯತಿ ಸಮಿತಿ ರಚಿಸಲ್ಪಡಬೇಕು. ಈ ಸಮಿತಿಯಲ್ಲಿ ಗ್ರಾಮಪಂಚಾಯತಿಗಳ, ಸಹಕಾರಿ ಸಂಘಗಳ, ಸಣ್ಣ ಸಣ್ಣ ಮುನಸಿಪಾಲಿಟಿಗಳ ಪ್ರತಿನಿಧಿಗಳು ಇರುತ್ತಾರೆ. ಅಲ್ಲದೆ ಎಮ್. ಎಲ್. ಎ ಮತ್ತು ಕೆಲ ಅಧಿಕಾರಿಗಳೂ ಇರುತ್ತಾರೆ ಮತ್ತು ಹೆಣ್ಣುಮಕ್ಕಳ, ದಲಿತವರ್ಗಗಳ ಪ್ರತಿನಿಧಿಗಳನ್ನೂ ಐಚ್ಛಿಕವಾಗಿ ತೆಗೆದುಕೊಳ್ಳುವ ವ್ಯವಸ್ಥೆ ಇರುತ್ತದೆ. ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಪರಿಷತ್ತು ರೂಪುಗೊಳ್ಳುವದು. ಪಂಚಾಯತ ಸಮಿತಿಯಂತೆ ಇಲ್ಲಿಯೂ ಪ್ರತಿ

ನಿಧಿಗಳು ಇರುತ್ತಾರೆ. ಇಲ್ಲಿ ಎಲ್ಲ ಪಂಚಾಯತ ಸಮಿತಿಗಳ ಸರಪಂಚ ಅಥವಾ ಪ್ರಧಾನರು ಇರುತ್ತಾರೆ. ಜಿಲ್ಹೆಯ ಎಮ್. ಪಿ. ಗಳು ಮತ್ತು ಎಮ್. ಎಲ್. ಎ. ಗಳು ಅಲ್ಲದೆ ಕೇಂದ್ರ ಸಹಕಾರೀ ಬ್ಯಾಂಕಿನ ಅಧ್ಯಕ್ಷರು ಮತ್ತು ಜಿಲ್ಹೆಯ ಕಲೆಕ್ಟರ ಅಥವಾ ಡೆಪ್ಯೂಟಿ ಕಮಿಶನರ ಈ ಪರಿಷತ್ತಿನಲ್ಲಿ ಇರುತ್ತಾರೆ. ಐಚ್ಛಿಕವಾಗಿ ಹೆಣ್ಣುಮಕ್ಕಳ ಪರವಾಗಿ ಇಬ್ಬರು ಪ್ರತಿನಿಧಿಗಳು ಅಂದರೆ ಸರಪಂಚರಲ್ಲಿ ಯಾರೂ ಹೆಣ್ಣುಮಕ್ಕ-ಳಿರದಿದ್ದರೆ, ಯಾರಾದರೂ ಹೆಣ್ಣುಮಕ್ಕಳು ಸರಪಂಚರಾಗಿ ಪ್ರತಿನಿಧಿಸಿದರೆ ಅಷ್ಟು ಪ್ರತಿನಿಧಿತ್ವವನ್ನು ಕಡಿಮೆ ಮಾಡಬೇಕು. ಅಂತೂ ಹೆಣ್ಣುಮಕ್ಕಳ ಪರವಾಗಿ ಎರಡು ಸ್ಥಳಗಳು ಇರಬೇಕು. ಅದರಂತೆ ದಲಿತ ವರ್ಗ ಮತ್ತು ದಲಿತ ಗುಂಪಿನ ಪರವಾಗಿ ಒಬ್ಬೊಬ್ಬರು ಇರುತ್ತಾರೆ. ಆಡಳಿತದಲ್ಲಿ ಅನುಭವವಿದ್ದ ಒಬ್ಬ ಪ್ರತಿನಿಧಿಗಳು ಮತ್ತು ಸಮಾಜಸೇವೆಯಲ್ಲಾಗಲಿ ಅಥವಾ ಗ್ರಾಮೀಣ ಸುಧಾರಣೆಯಲ್ಲಾಗಲಿ ಆಸಕ್ತರಾದಂಥ ಒಬ್ಬ ಪ್ರತಿನಿಧಿಗಳು ಇರುತ್ತಾರೆ.

ಪಂಚಾಯತಿಗಳ ಆರ್ಥಿಕ ವ್ಯವಸ್ಥೆ; ಅನೇಕ ತರದ ಗ್ರಾಮೀಣ ಕರಗಳು ಮತ್ತು ಕಾಣಿಕೆಗಳಲ್ಲದೆ, ಸಹಾಯಧನ (Grants-in-aid) ಪಂಚಾಯತಿಗಳಿಗೆ ಸಿಗುತ್ತದೆ. ಇತ್ತೀಚೆಗೆ ಮೈಸೂರು ಪ್ರಾಂತದಲ್ಲಿ ನಿಯಮಿಸಲ್ಪಟ್ಟ ಕೊಂಡಜ್ಜಿ ಬಸಪ್ಪ ಸಮಿತಿ ಸಿಫಾರಿಸಿನ ಮೇರೆಗೆ ಭೂತೆರಿಗೆ ಮತ್ತು ಸರಜಾರ್ಜುಗಳ ಒಟ್ಟು ಹಣದಲ್ಲಿ ನೂರಕ್ಕೆ ೩೦ ರಷ್ಟು ಗ್ರಾಮಪಂಚಾಯತಿಗಳಿಗೆ ತೆಗೆದಿಡಬೇಕು ಎಂದಿದೆ. ಹಾಗೂ ನೂರಕ್ಕೆ ೩೫ ರಷ್ಟು

ತಾಲೂಕ ಅಭಿವೃದ್ಧಿ ಸಮಿತಿಗೆ ಕೊಡಬೇಕು. ಮತ್ತೆ ನೂರಕ್ಕೆ ೨೦ ರಷ್ಟು ಜಿಲ್ಲಾ ಪರಿಷತ್ತುಗಳಿಗೆ ಕೊಡಬೇಕು ಎಂದು ಗೊತ್ತಾಗಿದೆ. ಉಳಿದ ನೂರಕ್ಕೆ ೧೫ ರಷ್ಟು ರಾಜ್ಯ ಭದ್ರತಾನಿಧಿಯಲ್ಲಿ ಕೂಡಿಸಬೇಕು. ಈ ನೂರಕ್ಕೆ ೧೫ರಷ್ಟರಲ್ಲಿ, ೫ರಷ್ಟು ಪಂಚಾಯತಿಗೆ, ೫ ರಷ್ಟು ತಾ. ಅ. ಮಂಡಳಕ್ಕೆ ಮತ್ತುಳಿದ ೫ ರಷ್ಟು ಜಿಲ್ಲಾ ಪರಿಷತ್ತುಗಳಿಗೆ ಹಂಚಬೇಕು. ಈ ಹಣವು ಭೂತೆರಿಗೆಯಲ್ಲಿ ಕಡಿತವಾದಾಗ ಅಥವಾ ಇನ್ನೂ ಅನೇಕ ಕಾರಣಗಳಿಂದ ಹಣದ ಕೊರತೆಯಾದಾಗ ಆಯಾ ಹಂತದಲ್ಲಿ ಮೇಲ್ಕಂಡ ಪ್ರಕಾರ ಉಪಯೋಗಿಸಲ್ಪಡಬೇಕು ಎಂದು ಗೊತ್ತುಪಡಿಸಿದ್ದಾರೆ. ಇದಲ್ಲದೆ ಧಾನ್ಯಕರ ಸಹ ಎತ್ತಲು ಪಂಚಾಯತಿಗಳಿಗೆ ಆಸ್ಪದವಿರಬೇಕೆಂದು ಸಿಫಾರಸು ಮಾಡಲಾಗಿದೆ. ಈ ಗ್ರೇನ ಟ್ಯಾಕ್ಸ ಎತ್ತುವದರಿಂದ ಪಂಚಾಯಿತಿಗಳು ಭೂಅಭಿವೃದ್ಧಿ ಕಾರ್ಯವನ್ನು ಮಾಡುವ ದಕ್ಕೆ ಉತ್ತೇಜನ ಕೊಟ್ಟಂತಾಗುವದು. ಅಲ್ಲದೆ ಈ ಕರದಿಂದ ವ್ಯಾಪಾರಿ ಸಹಕಾರಿ ಸಂಸ್ಥೆಗಳನ್ನು ಬಲಪಡಿಸಿ-ದಂತಾಗುವದು ಮತ್ತು ಈ ರೀತಿಯಿಂದ ಮಾರಾಟಕ್ಕೆ ತೆಗೆದಿರಿಸುವ ಒಕ್ಕಲುತನ ಹುಟ್ಟುವಳಿಯು ಹುಟ್ಟುವಳಿ ಯಿಂದ ಮಾರಾಟಕ್ಕೆ ಬಂದ ಅಧಿಕಸಂಗ್ರಹ ಹೆಚ್ಚಾಗುವದು. ಅಂತೂ ಪಂಚಾಯತಿಗಳ ಆರ್ಥಿಕ ವ್ಯವಸ್ಥೆ ಭದ್ರವಾಗಿರ ಬೇಕು. ಅಭಿವೃದ್ಧಿ ಕಾಲವಲ್ಲಿ ಪಂಚಾಯತಿಗಳಿಗೆ ಮತ್ತು ತಾ. ಅ. ಮಂಡಳಗಳಿಗೆ ಹೆಚ್ಚಿನ ಭಾರ ಬಿದ್ದಿದ್ದರಿಂದ ಆರ್ಥಿಕ ಮುಗ್ಗಟ್ಟಾದರೆ ಅಭಿವೃದ್ಧಿ ಕಾರ್ಯ ಯಶಸ್ವಿಯಾಗುವದಿಲ್ಲ.

ಆದರೆ ಆ ಹಣದ ಸದುಪಯೋಗವಾಗುವಂತೆ ಆವಶ್ಯಕ ಕ್ರಮಗಳನ್ನು ತೆಗೆದುಕೊಳ್ಳುವದವಶ್ಯ.

ಗ್ರಾಮಪಂಚಾಯತಿಗಳು ಭದ್ರವಾದ ಆಡಳಿತದ ಬೇರುಗಳಾಗಿವೆ ಎಂಬುದನ್ನು ಅವುಗಳು ಮಾಡತಕ್ಕ ಕಾರ್ಯಬಾಹುಲ್ಯದಿಂದ ಮನಗಾಣಬಹುದು. ಮುಖ್ಯವಾಗಿ ಪಂಚಾಯತಿ ಕಾರ್ಯಗಳನ್ನು (೧) ಪೌರಾಡಳಿತ (Civic) (೨) ಅಭಿವೃದ್ಧಿ (Development) (೩) ಭೂಮಿಯ ಉತ್ಪಾದನೆಯ ಮೇಲ್ವಿಚಾರಣೆ (Agricultural Development) ಮತ್ತು (೪) ಭೂಸುಧಾರಣೆಗಳನ್ನು (Land Reforms) ಫಲಕಾರಿ ಮಾಡುವದು, ಎಂದು ವಿಭಾಗಿಸಿ ಹೇಳಬಹುದು. ಮೊದಲು ಹೇಳಿದಂತೆ ಪಂಚಾಯತಿಗಳು ಸಮಾಜ ಅಭಿವೃದ್ಧಿ ಯೋಜನೆಯ ಮುಖ್ಯ ಅಂಗಗಳಾಗಿವೆ.

ಪಂಚಾಯತಿ ರಾಜ್ಯವು ಫಲಕಾರಿಯಾಗಿದೆಯೋ ಹೇಗೆ ಎಂಬುದನ್ನು ನಿರ್ಧರಿಸಲು ಕೆಳಗೆ ಕಾಣಿಸಿದ ಸೂಚನೆಗಳನ್ನು ನೋಡಬೇಕೆಂದು ಮೂರನೇ ಪಂಚವಾರ್ಷಿಕ ಯೋಜನೆಯು ಧಾರಾಳವಾಗಿ ಸ್ಪಷ್ಟ ಪಡಿಸಿದೆ:

(೧) ಕೃಷಿ ಉತ್ಪಾದನೆಗೆ ಪ್ರಾಧಾನ್ಯತೆಯನ್ನೀಯುವದು.

(೨) ಗ್ರಾಮೀಣ ಉದ್ಯೋಗ-ದಂಧೆಗಳನ್ನು ಬಲಬಲಪಡಿಸುವದು.

(೩) ಸಹಕಾರಿ ಸಂಘಗಳನ್ನು ಪ್ರೋತ್ಸಾಹಿಸಿ, ಅಭಿವೃದ್ಧಿಯಾಗುವಂತೆ ನೋಡಿಕೊಳ್ಳುವದು.

(೪) ಗ್ರಾಮೀಣ ಮನುಷ್ಯಶಕ್ತಿ (Man-power) ಮತ್ತು ಇತರ ಸಂಪನ್ಮೂಲಗಳ ಪೂರ್ಣ ಉಪಯೋಗ ಮಾಡುವದು.

(೫) ಶೈಕ್ಷಣಿಕ ಅನುಕೂಲತೆ ಮಾಡಿಕೊಟ್ಟು, ಪ್ರೌಢ ಶಿಕ್ಷಣವನ್ನು ಪ್ರಸಾರಗೊಳಿಸುವದು.

(೬) ಪಂಚಾಯತಿಗಳ ಅಂಕಿತದಲ್ಲಿರುವ ಹಣ, ತಾಂತ್ರಿಕ ಸಲಕರಣೆ ಮತ್ತು ಮೇಲಿನಿಂದ ಬಂದ ಉಳಿದ ಅನುಕೂಲತೆಗಳನ್ನು ಉತ್ತಮ ರೀತಿಯಿಂದ ಉಪಯೋಗಿಸುವದು.

(೭) ಆರ್ಥಿಕ ದುರ್ಬಲತೆಯಿಂದ ಸಣ್ಣಾಗುವ ಬಡ ಜನರಿಗೆ ಸಹಾಯ ಸಹಕಾರಗಳನ್ನು ನೀಡುವದು.

(೮) ಮುಂದಾಳುತನ ಮತ್ತು ಅಧಿಕಾರದ ಸರಿಯಾದ ಹಂಚಿಕೆಯಾಗುವಂತೆ ನೋಡಿಕೊಳ್ಳುವದು ಮತ್ತು ಸಾಂಘಿಕ ಚಟುವಟಿಕೆಗಳನ್ನು ಏರ್ಪಡಿಸುವದು.

(೯) ಶಿಕ್ಷಣ ತರಬೇತಿಯಿಂದ ಮತ್ತು ಹಕ್ಕುಬಾಧ್ಯತೆಗಳ ವಿಭಜನೆಯಿಂದ ಸಮಾಜ ಕಾರ್ಯಕರ್ತರಲ್ಲಿ ಮತ್ತು ಸರಕಾರಿ ಅಧಿಕಾರಿಗಳಲ್ಲಿ ಒಳ್ಳೇ ಪ್ರಭಾವವನ್ನು ಬೀರುವದು ಮತ್ತು ಪರಸ್ಪರರಲ್ಲಿ ತಿಳುವಳಿಕೆಯಾಗುವಂತೆ ವರ್ತಿಸುವದು.

(೧೦) ಸಮಾಜದಲ್ಲಿ ಐಕ್ಯತೆ ಮತ್ತು ಪರಸ್ಪರ ಸಹಾಯ ಸಹಕಾರಗಳು ಬೆಳೆಯುವಂತೆ ಪ್ರಯತ್ನಿಸುವದು.

ಇಂಥ ಗುರುತರ ಹೊಣೆಯನ್ನು ಪಂಚಾಯತಿಯ ಪ್ರಭೃತಿಗಳು ಅರಿತಿದ್ದಾರೆಯೆ? ಅವುಗಳಂತೆ ನಡೆಯು-

ತ್ತಿದ್ದಾರೆಯೆ ? ಎಂಬ ಶಂಕೆಗಳು ಹುಟ್ಟುತ್ತವೆ. ಈ ಶಂಕೆ-ಸಂಶಯಗಳನ್ನು ದೂರೀಕರಿಸಲು ನಾವು "ಇಂಡಿಯನ್ ಇನ್ಸಿಟ್ಯೂಟ ಆಫ್ ಪಬ್ಲಿಕ್ ಒಪಿನಿಯನ್" ಸಂಸ್ಥೆ ನಡೆಸಿದ ಇತ್ತೀಚಿನ ಸಮೀಕ್ಷಣೆಯ ಮುಖ್ಯ ಅಂಶಗಳನ್ನು ನೋಡೋಣ. ಈ ಭಾರತೀಯ ಜನಾಭಿಪ್ರಾಯ ಸಂಸ್ಥೆಯು ೨೦೦ ಜನರನ್ನು ಸಂದರ್ಶಿಸಿ ಕಲೆಹಾಕಿದ ಸಂಗತಿಗಳು ಬಹಳ ಉಪಯೋಗವಾಗಬಲ್ಲವು. ಲೋಕ ಸಭೆಯ ೭೭ ಕಾಂಗ್ರೆಸ ಸದಸ್ಯರು, ೨೩ ವಿರೋಧ ಪಕ್ಷದ ಸದಸ್ಯರು; ಅದರಂತೆ ೩೨ ಶಿಕ್ಷಣ ತಜ್ಞರು ಇನ್ನುಳಿದ ಅನೇಕ ಪ್ರಕಾರದ ೬೩ ಜನರ ಅಭಿಪ್ರಾಯಗಳನ್ನು ಇಲ್ಲಿ ಕಲೆ ಹಾಕಿದ್ದಾಗಿದೆ. ಈ ಸಮೀಕ್ಷಣೆಯು ಪಂಚಾಯತಿ ರಾಜ್ಯದ ಬಗೆಗೆ ಅಲ್ಲದೆ, ಸಮಾಜ ಅಭಿವೃದ್ಧಿಯ ಯೋಜನೆಯ ಬಗ್ಗೆಯೂ ಅಭಿಪ್ರಾಯಗಳನ್ನು ಸಂಗ್ರಹಿಸಿದೆ. ಇಲ್ಲಿ ಕಲೆಹಾಕಿದ ಮಾಹಿತಿಯು ಐದು ಪ್ರಕಾರದ್ದಿರುವದು. (೧) ಸಂಬಂಧಿಸಿದ ಯೋಜನೆಯು (ಸಹಕಾರ ಮತ್ತು ಸಮಾಜ ವಿಕಾಸ ಯೋಜನೆ) ಎಷ್ಟರ ಮಟ್ಟಿಗೆ ಪ್ರಜಾಸತ್ತೆಯ ಬೇರಾಗಿದೆ? (೨) ಸಂಬಂಧಿಸಿದ ಸಂಸ್ಥೆಯಲ್ಲಿ ಸ್ವಾವಲಂಬನೆ ಮತ್ತು ರಾಜಕೀಯ ಜ್ಞಾನವು ಹೇಗೆ ಬೆಳೆದು ಬಂದಿದೆ? (೩) ರಾಜಕೀಯ ಜಾಗೃತಿ (Political vigilance) ಎಷ್ಟರ ಮಟ್ಟಿಗೆ ಜನರಲ್ಲಿ ಬದಲಾವಣೆಯನ್ನು ಮಾಡಿದೆ? (೪) ರಾಜಕೀಯ ಪಕ್ಷಗಳು, ಈ ಸಂಸ್ಥೆಗಳ ಮೇಲೆ ಎಷ್ಟರ ಮಟ್ಟಿಗೆ ತಮ್ಮ ಪ್ರಭಾವವನ್ನು ಬೀರುತ್ತವೆ? ಮತ್ತು

(೫) ಯೋಜನೆಯು ಭವಿಷ್ಯದ ಬಗ್ಗೆ ಯಾವ ಉಪಾಯಗಳನ್ನು ಸೂಚಿಸುತ್ತೀರಿ ? ಎಂಬುದನ್ನು ಕುರಿತು ಸಂಗ್ರಹಿಸಿದ್ದಾಗಿದೆ.

ಇನ್ನು ಪಂಚಾಯತಿ ರಾಜ್ಯದ ಬಗ್ಗೆ ಈ ಮೇಲಿನ ಮಾಹಿತಿಯನ್ನು ಪರೀಕ್ಷಿಸೋಣ :

(೧) ಮೊದಲನೆಯದಾಗಿ ನೂರಕ್ಕೆ ೧೪ರಷ್ಟು ಜನರು ಪಂಚಾಯತಿ ರಾಜ್ಯವು ಪ್ರಜಾಪ್ರಭುತ್ವದ ಬೇರು ಬಿಡಲು ಬಹುಮಟ್ಟಿಗೆ ಸಹಾಯವಾಗಿದೆ ಎಂದು ಅಭಿಪ್ರಾಯಪಟ್ಟರು. ನೂರಕ್ಕೆ ೫೫ರಷ್ಟು ಜನರು ಕೆಲಮಟ್ಟಿಗೆ ಪ್ರಭಾವಬೀರಿವೆ ಎಂದೂ ಮತ್ತೆ ನೂರಕ್ಕೆ ೨೨ ಜನರು ಬೀರಿಲ್ಲವೆಂದೂ, ಉಳಿದ ನೂರರಲ್ಲಿ೯ ಜನರು ಅಭಿಪ್ರಾಯ ಕೊಟ್ಟಿಲ್ಲವೆಂದೂ ಕಂಡು ಬಂದಿದೆ. ಪಂಚಾಯತೀ ರಾಜ್ಯವು ಏಕೆ ಫಲಕಾರಿಯಾಗಿಲ್ಲವೆಂಬ ಪ್ರಶ್ನೆಗೆ ನೂರಕ್ಕೆ ೨೧ ಜನರು ಆಡಳಿತದ ಸಾವಧಾನ ಮತ್ತು ಅಧಿಕಾರದ ಅನುಚಿತ ಉಪಯೋಗದಿಂದಾಗಿದೆ ಎಂದರು. ನೂರರಲ್ಲಿ ೨೦ ಜನರು ಸಾಮಾನ್ಯವಾಗಿ ಪ್ರಜೆಗಳ ಅಜ್ಞಾನವೇ ಕಾರಣವೆಂದು, ನೂರಕ್ಕೆ ೧೭ ಜನರು ಮುಂದಾಳುಗಳ ಸ್ವಾರ್ಥಸಾಧಕತೆಯಿಂದ ಫಲಕಾರಿಯಾಗಿಲ್ಲವೆಂದರು.

(೨) ಪಂಚಾಯತಿಗಳಿಗೆ ಆರಿಸಿ ಹೋದವರು ಸರಕಾರದ ಅಧಿಕಾರಿಗಳ ಹಾಗೆ ವರ್ತಿಸುತ್ತಾರೆ. ಜನರನ್ನು ಸ್ವಾವಲಂಬಿ ಮಾಡಲು ಮತ್ತು ರಾಜಕೀಯ ಜ್ಞಾನವನ್ನು ಹೆಚ್ಚಿಸಲು ಆರಿಸಿ ಹೋಗಿದ್ದೇವೆ ಎಂಬುದನ್ನು ಮರೆತಿರುತ್ತಾರೆಂದು ನೂರಕ್ಕೆ ೭೫ ಜನರಿಂದ ಅಭಿಪ್ರಾಯ ಬಂದಿದೆ. ಹಾಗಾದರೆ ಜನರಲ್ಲಿ ಹೇಗೆ ರಾಜಕೀಯ ಜ್ಞಾನದೃಷ್ಟಿಯನ್ನು ಬೆಳೆಸಬೇಕು

ಮತ್ತು ಅವರಲ್ಲಿ ಮುಂದಾಳುತನದ ಯೋಗ್ಯತೆಯನ್ನು ಹುಟ್ಟಿಸಬೇಕು ಎಂಬ ಪ್ರಶ್ನೆಗೆ ನೂರಕ್ಕೆ ೬೫ ರಷ್ಟು ಜನರು ಸವಿಸ್ತಾರ ಮತ್ತು ಆಳವಾದ ಶಿಕ್ಷಣದಿಂದ ಸಾಧ್ಯವೆಂದರು.

(೩) ಪಂಚಾಯತಿ ರಾಜ್ಯದ ಪ್ರಾಯೋಗಿಕತೆಯಿಂದ ಜನರಲ್ಲಿ ರಾಜಕೀಯ ಪರಿಸ್ಥಿತಿಯಲ್ಲಿ ಅಭಿರುಚಿ ಹುಟ್ಟಲು ಸುರುವಾಗಿದೆ. ಸುಮಾರು ನೂರಕ್ಕೆ ೭೦ ಜನರು ಮೇಲಿನಂತೆ ಅಭಿಪ್ರಾಯ ಕೊಟ್ಟರು. ನೂರಕ್ಕೆ ೧೮ ಜನರು ಪಂಚಾಯತಿಗಳು ಏನೂ ಬದಲಾವಣೆ ಮಾಡಿಲ್ಲವೆಂದರು. ನೂರಕ್ಕೆ ೬೦ ರಷ್ಟು ಜನರು ಪಂಚಾಯತಿಗಳು ಪಕ್ಷ-ಪಂಗಡಗಳಿಗೆ ಮತ್ತು ಒಳಜಗಳಗಳಿಗೆ ಆಸ್ಪದವಿತ್ತಿವೆ ಎಂದರು. ಆದರೂ ಈ ಜನರು ಅಷ್ಟೊಂದು ನಿರಾಶೆ ವ್ಯಕ್ತಮಾಡಲಿಲ್ಲ. ಯಾಕಂದರೆ ಜನ ಸಾಮಾನ್ಯರ ಶಿಕ್ಷಣ ಮಟ್ಟ ಬೆಳೆದರೆ ಮತ್ತು ಬಹಳ ಜನರಿಗೆ ಯೋಗ್ಯ ಶಿಕ್ಷಣ ದೊರೆತರೆ ಇವೆಲ್ಲ ಕುಂದುಕೊರತೆಗಳು ಮಾಯವಾಗುವವು ಎಂಬ ಅಭಿಪ್ರಾಯ ತಳೆದಿದ್ದಾರೆ. ಆದರೆ ಉಳಿದ ನೂರಕ್ಕೆ ೩೦ ಜನರು ನಿರಾಶಾವಾದಿಗಳಾಗಿದ್ದಾರೆ.

(೪) ಪಂಚಾಯತಿಗಳಲ್ಲಿ ರಾಜಕೀಯ ಪಕ್ಷಗಳ ಕೈವಾಡ ಬಹಳಿದೆ ಎಂದು ನೂರಕ್ಕೆ ೮೫ ಜನರು ಅಭಿಪ್ರಾಯಪಟ್ಟಿರುವರು. ಅಲ್ಲದೆ ಆ ಸಂಸ್ಥೆಯಲ್ಲಿ ಒಳ್ಳೇ ಅಧಿಕಾರದ ಜಾಗೆಗಾಗಿ ಈಗ ಅಧಿಕಾರದಲ್ಲಿರುವ ಕಾಂಗ್ರೆಸ ಪಕ್ಷವು ಪ್ರಯತ್ನಿಸುತ್ತಿದೆ ಎಂದರು. ಈ ವಿಚಾರವನ್ನು ನೂರಕ್ಕೆ ೩೭ ಜನರು ಪುಷ್ಟೀಕರಿಸಿದರು. ಆದರೆ ನೂರಕ್ಕೆ ೪೭ ಜನರು ನಿರಾಕರಿಸಿದರು. ಇದಲ್ಲದೆ ನೂರಕ್ಕೆ ೩೦ ಜನರು ರಾಜಕೀಯ

ಪಕ್ಷಗಳು ನಿಷ್ಪಕ್ಷಪಾತತನದಿಂದ ಪಂಚಾಯತಿ ಪ್ರತಿನಿಧಿಗಳಿಗೆ ಫಲಕಾರಿ ಉಪದೇಶ ಮತ್ತು ದಾರಿ ತೋರಿಸಬೇಕೆಂದಿರುವರು. ನೂರಕ್ಕೆ ೨೫ ಜನರು ರಾಜಕೀಯ ಪಕ್ಷಗಳು ಜನಸಾಮಾನ್ಯರ ಅಶಿಕ್ಷತತನ ಮತ್ತು ಅಜ್ಞಾನವನ್ನು ಹೋಗಲಾಡಿಸಲು ಪ್ರಯತ್ನ ಮಾಡಬೇಕೆಂದಿರುವರು. ಹೀಗೆ ಮಾಡುವದರಿಂದ ಜನರಲ್ಲಿ ರಾಜಕೀಯ ಜ್ಞಾನ ಪಸರಿಸಲು ಅನುಕೂಲವಾಗುವದು ಎಂದು ಅವರ ಅಭಿಪ್ರಾಯ.

(೫) ಪಂಚಾಯತಿ ರಾಜ್ಯ ಫಲಪ್ರದವಾಗಬೇಕಾದರೆ, ಹೆಚ್ಚು ಅಧಿಕಾರಗಳನ್ನು ಕೊಡಬೇಕು ಎಂಬುದಕ್ಕೆ ನೂರಕ್ಕೆ ೨೬ ಜನರು ಸಮ್ಮತಿ ನೀಡಿದರು. ಆದರೆ ನೂರಕ್ಕೆ ೪೬ ಜನರು ಈಗಿದ್ದ ಹಾಗೆ ಮುಂದುವರಿಯಬೇಕು ಅಂದರೆ ಹೆಚ್ಚು ಕಡಿಮೆ ಮಾಡಬಾರದೆಂದರು. ಉಳಿದ ನೂರರಲ್ಲಿ ೧೨ ಜನರು ಈಗಿದ್ದ ಅಧಿಕಾರದಲ್ಲಿ ಕಡಿತ ಮಾಡಬೇಕೆಂದರು. ಯಾಕಂದರೆ ಈಗ ಅಧಿಕಾರದಲ್ಲಿರುವವರ ಶಿಕ್ಷಣ ಮಟ್ಟ ಕಡಿಮೆ ಇದೆ, ಮತ್ತು ಅವರಿಗೆ ಅನುಭವ ಕಡಿಮೆ. ಅಲ್ಲದೆ ರಾಜಕಾರಣದ ಪೂರ್ಣ ಅರಿವಿಲ್ಲದವರೂ ಇರುವರು. ಇಂಥವರಿಗೆ ಹೆಚ್ಚು ಅಧಿಕಾರ ಕೊಟ್ಟರೆ ದುರುಪಯೋಗ ಮಾಡಿಕೊಳ್ಳುವರೆಂದು ಅವರ ಅಭಿಪ್ರಾಯ.

ಕೊನೆಯದಾಗಿ ಈ ಪಂಚಾಯತಿ ರಾಜ್ಯ ಬಂದಂದಿನಿಂದ ಸಮಾಜ ವಿಕಾಸ ಯೋಜನೆ ಮತ್ತು ಸಮಾಜಾಭಿವೃದ್ಧಿ ಯೋಜನೆಗಳ ಕಾರ್ಯ ಪ್ರವೃತ್ತಿಯು ಸುಧಾರಿಸಲ್ಪಟ್ಟಿವೆ. ಎಂದು ನೂರರಲ್ಲಿ ೫೨ ಜನರು ಅಭಿಪ್ರಾಯ ತಳೆದಿರುವರು.

ಆದರೆ ನೂರರಲ್ಲಿ ೨೫ ಜನರು ಯಾವ ಬದಲಾವಣೆಯೂ ಆಗಿಲ್ಲವೆಂದಿರುವರು.

ಅಂತೂ ಪಂಚಾಯತಿ ರಾಜ್ಯವು ಸಮಗ್ರ ಯೋಜನೆಯಾದ ಸಮಾಜ ಅಭಿವೃದ್ಧಿ ಯೋಜನೆಯನ್ನು ಪರಿಣಾಮಕಾರಿಯಾಗಿ ಕಾರ್ಯೋನ್ಮುಖವಾಗಿರುವಂತೆ ನೋಡಿಕೊಳ್ಳಲು ಸಹಕಾರಿಯಾಗುವಂತೆ ಮಾರ್ಪಡಿಸುವದೇ ಯಾವತ್ತೂ ಜನರ ಮತ್ತು ಸರಕಾರದ ಮುಖ್ಯ ಹೊಣೆಯಾಗಬೇಕೆಂದು ಈ ಮೇಲಿನ ಎಲ್ಲ ಅಭಿಪ್ರಾಯಗಳ ಸಾರಾಂಶವೆನ್ನಬಹುದು.

# ೪. ಸಮಾಜ-ಅಭಿವೃದ್ಧಿ ಯೋಜನೆ

ಸಮಾಜ ಅಭಿವೃದ್ಧಿಯೋಜನೆಯು ಒಂದಿಲ್ಲೊಂದು ಪ್ರಕಾರದಿಂದ ಸಾಮಾನ್ಯವಾಗಿ ಎಲ್ಲ ರಾಷ್ಟ್ರಗಳಲ್ಲಿ ಕಂಡು ಬರುತ್ತದೆ. ಇದರ ಹುಟ್ಟುವಳಿ ಕೇವಲ ಇತ್ತೀಚಿನದು ಅಂದರೆ ೨ನೇ ಜಾಗತಿಕ ಮಹಾಯುದ್ಧದ ತರುವಾಯದಲ್ಲಿ ಬಂದುದು ಎನ್ನಬಹುದು. ಬೇರೆ ದೇಶಗಳಿಗಿಂತ, ಭಾರತದಲ್ಲಿ ಈ ಯೋಜನೆಯು ಬಲುಗಾತ್ರವಾಗಿ ಬೆಳೆದಿದ್ದು, ಪರಿಪೂರ್ಣರೀತಿಯಿಂದ ಸಮಾಜದ ಉದ್ಧಾರವನ್ನು ಮಾಡಲು ತೊಡಗಿದೆ ಎನ್ನಬಹುದು. ಪಾಕಿಸ್ತಾನದಲ್ಲಿ National Development Organization ಎಂಬ ಹೆಸರಿನಲ್ಲಿ ಈ ಯೋಜನೆ ಕಾರ್ಯಕ್ಕಿಳಿದಿದೆ. ಸಿಲೋನದಲ್ಲಿ ಡಿಪಾರ್ಟಮೆಂಟ ಆಫ್ ರೂರಲ್ ಡೆವ್ಹಲಪ್‌ಮೆಂಟ ಹಾಗೂ ಕಾಟೇಜ ಇಂಡಸ್ಟ್ರೀಜ ಎಂಬುದು ಸಮಾಜ ಅಭಿವೃದ್ಧಿಯನ್ನು ಕೈಕೊಂಡಿದೆ. ಫಿಲಿಪಾಯಿನ್ಸದಲ್ಲಿ ಈ ಯೋಜನೆಯೇ ಪ್ಲ್ಯಾನಿಂಗ್ ಕೌನ್ಸಿಲ್ ಎಂದಾಗಿದೆ. ಮತ್ತು ನೇಪಾಳದಲ್ಲಿ "ವ್ಹಿಲೇಜ ಡೆವ್ಹಲಪ್‌ಮೆಂಟ ಪ್ರೊಗ್ರಾಮ್ ಎಂದು ಕಾರ್ಯ ನಡೆಸುತ್ತದೆ.

ಭಾರತದಲ್ಲಿಯೂ ಸಹಕಾರ ಹಾಗೂ ಸಮಾಜ ವಿಕಾಸಯೋಜನೆ ಮಂತ್ರಿಶಾಖೆ ಎಂದು ಮೊದಮೊದಲು ಬೇರೆ

ಸ್ಥಾಪಿತವಾಗಿದ್ದರೂ ಈಗ ಇದು ಆಹಾರ ಹಾಗೂ ಒಕ್ಕಲುತನ ಮಂತ್ರಿಶಾಖೆಗೆ ಕೂಡಿಕೊಂಡಿದೆ. ಆದರೂ ಸಮಾಜ ಅಭಿವೃದ್ಧಿಯೋಜನೆಗೆ ಒಂದು ತರಹದ ವಿಶಿಷ್ಟ ರೂಪ ಮತ್ತು ಮಹತ್ವವಿದೆ. ಪರಕೀಯರ ಆಡಳಿತದಿಂದ ಇಡೀ ದೇಶವೇ ನುಗ್ಗಾಯಿತು. ಅದರಿಂದ ಹಳ್ಳಿಗಳಲ್ಲಿಯ ಸ್ವಾವಲಂಬನ ಇಲ್ಲದಂತಾಯಿತು. ಜನರಲ್ಲಿ ಸಹಕಾರ, ಸಹಾನುಭೂತಿಗಳು ಪರಸ್ಪರರಲ್ಲಿ ಇಲ್ಲದಂತಾದವು. ಅಧಿಕಾರದ ಲಾಲಸೆಯಿಂದ ಸ್ವಲ್ಪೇ ಜನರು (ಪರಕೀಯರ ದಾಸರಾಗಿ) ಬಹುಜನರನ್ನು ಪೀಡಿಸಿದರು. ಸಾಂಸ್ಕೃತಿಕ ಜೀವನವೂ ಕಳೆಗುಂದಿತು. ನಿರುದ್ಯೋಗತನ ಮತ್ತು ದಾರಿದ್ರ್ಯಗಳು ತಲೆದೋರಿದವು. ಭೂಹಿಡುವಳಿಗಳು ಸಣ್ಣಾಗುತ್ತಾ ಭೂಮಿಯ ಉತ್ಪಾದನೆಯನ್ನು ಕಡಿಮೆಮಾಡಿದವು. ಅಂತೂ ಆರ್ಥಿಕ ವ್ಯವಸ್ಥೆಯು ಹದಗೆಟ್ಟಿತು. ಹೀಗಾಗಿ ಮಹಾತ್ಮಾ ಗಾಂಧಿಯವರು ವರ್ಧಾ ಯೋಜನೆಯನ್ನು ಪ್ರಾರಂಭಿಸಿದರು. ಕವಿ ರವೀಂದ್ರರು ಶಾಂತಿನಿಕೇತದಲ್ಲಿ ಹಳ್ಳಿಗಳ ಪುನರ್ಘಟನೆಯೆಂಬ ಯೋಜನೆಯನ್ನು ಆರಂಭಿಸಿದರು. ಆಚಾರ್ಯ ವಿನೋಬಾ ಭಾವೆ ಮತ್ತು ಜಯಪ್ರಕಾಶ ನಾರಾಯಣರೂ ಸರ್ವೋದಯ ಎಂಬ ಚಳವಳಿಯನ್ನು ಹಬ್ಬಿಸಿದರು. ಇಂಥ ಇನ್ನೂ ಕೆಲ ಉದಾಹರಣೆಗಳನ್ನು ಈ ಸಂದರ್ಭದಲ್ಲಿ ಕೊಡಬಹುದು. ಹದಗೆಟ್ಟ ಹಳ್ಳಿಗಳ ಪುನರುಜ್ಜೀವನವಾಗುವದು ಬಹಳೇ ಅವಶ್ಯವೆಂದು ಆಗಿನ ಸರಕಾರವು ನಿಯಮಿಸಿದ ರಾಯಲ್ ಕಮೀಶನ್ ಆನ್ ಅಗ್ರಿಕಲ್ಚರ್ (೧೯೨೮) ಸಹ ಅಭಿಪ್ರಾಯಪಟ್ಟಿತು. ಸ್ವಾತಂತ್ರ್ಯ ಪೂರ್ವದಲ್ಲಿ ಅನೇಕ

ಸರ್ವೋದಯದ ಕಾರ್ಯಗಳಿದ್ದವು ಮತ್ತು ಗ್ರಾಮಗಳ ಸರ್ವತೋಮುಖ ಉದ್ಧಾರ ಮಾಡಲು ಹೆಣಗಿದವು. ಆದರೆ ಆ ಕಾರ್ಯಕ್ರಮಗಳು ಸಣ್ಣ ಪ್ರಮಾಣದವು ಮತ್ತು ನಿಯಮಿತ ವ್ಯಾಪ್ತಿವುಳ್ಳವುಗಳು ಎಂದು ಅನ್ನಬಹುದು.

ಸಮಾಜಾಭಿವೃದ್ಧಿ ಯೋಜನೆಯು ರಾಷ್ಟ್ರದ ಆರ್ಥಿಕಾಭಿವೃದ್ಧಿಯನ್ನು ಹೇಗೆ ಪುಷ್ಟೀಕರಿಸುತ್ತದೆಂಬುದನ್ನು ನೋಡಬಹುದು. ಭಾರತವು ಬಲುದೊಡ್ಡ ದೇಶ, ಲಕ್ಷಗಟ್ಟಲೆ ಹಳ್ಳಿಗಳಿಂದ ತುಂಬಿದ್ದು, ಆ ಹಳ್ಳಿಗಳು ಬಿಡಿ ಬಿಡಿಯಾಗಿ ಹಬ್ಬಿ, ಆಡಳಿತಕ್ಕೆ ಅನಾನುಕೂಲವಾಗಿವೆ ಎನ್ನಬಹುದು. ಅದರಂತೆ ಹಳ್ಳಿಗಳು ತಮ್ಮವೇ ಆದ ಸಾಂಸ್ಕೃತಿಕ ಹಿನ್ನೆಲೆಯನ್ನು ಪಡೆದಿರುವವು. ಮತ್ತು ರಾಜಕೀಯ ದೃಷ್ಟಿಯಿಂದ ಅವುಗಳನ್ನು ಸುಧಾರಿಸಲು ಒಂದು ಸಮಗ್ರ ಯೋಜನೆ ಬೇಕಾಗಿತ್ತು. ಅಲ್ಲದೆ ಅವುಗಳ ಸಮಾಜಾಭಿವೃದ್ಧಿಯೂ ಆಗುವ ಒಂದು ಸಾಧನ ಹುಡುಕಬೇಕಾಗಿತ್ತು. ಅದಲ್ಲದೆ ಆರ್ಥಿಕ ಅಧೋಗತಿಗೀಡಾದ ಹಳ್ಳಿಗಳಿಗೆ ಪರಿಹಾರ ನೀಡಬೇಕಾಗಿತ್ತು. ಇವೆಲ್ಲವುಗಳನ್ನು ಒಂದೇ ದೊಡ್ಡ ಗಾತ್ರದ, ಉನ್ನತ ಧ್ಯೇಯದ ಮತ್ತು ಸಕಲ ವ್ಯಾಪ್ತಿಯುಳ್ಳ ಯೋಜನೆಯಲ್ಲಿ ತರುವದು ಅತ್ಯವಶ್ಯವಾಗಿತ್ತು. ಅಂಥ ಯೋಜನೆಯೇ ಈ ಸಮಾಜ-ಅಭಿವೃದ್ಧಿ ಯೋಜನೆಯೆನ್ನಬಹುದು. ಈ ಯೋಜನೆಯು ಜನಸಾಮಾನ್ಯರ ಆಗುಹೋಗುಗಳಲ್ಲಿ ಬದಲಾವಣೆಯಾಗುವಂತೆ ಪರಿಣಮಿಸಿ, ಜನರ ಮನಸ್ಸನ್ನೂ ಮತ್ತೂ ವಿಚಾರಗಳನ್ನೂ ಬದಲಿಸಿ ಆರ್ಥಿಕಾಭಿವೃದ್ಧಿಗೆ ಬೇಕಾಗುವ ಸಾಮಾಜಿಕ ವಾತಾವರಣ

ವನ್ನು ಉಂಟುಮಾಡುತ್ತದೆ. ಇದರಿಂದ ಸಮಾಜದಲ್ಲಿಯ ಕುಂದುಕೊರತೆಗಳು ಇಲ್ಲದಂತಾಗಿ ಸಾಮಾಜಿಕ ವೃದ್ಧಿಯಾಗುತ್ತದೆ. ಅದರಂತೆ ರಾಜಕೀಯಕ್ಷೇತ್ರದಲ್ಲಿ ಜನರಿಗೆ ಸ್ವಆಡಳಿತದ ಭಾರ ಬಿದ್ದು ರಾಷ್ಟ್ರದ ಆಡಳಿತದ ಸೂತ್ರಗಳನ್ನು ಕಲಿಸುತ್ತದೆ. ಜನರಲ್ಲಿ ಆಸಕ್ತಿ ಹುಟ್ಟಿ ಹೊಣೆಗಾರಿಕೆಗಳನ್ನು ಹೊತ್ತು ಕೊಂಡು ಹೋಗಲು ಸಿದ್ಧರಾಗುತ್ತಾರೆ. ಇದರಿಂದ ಜನರಲ್ಲಿ ಮುಂದಾಳುಗಳನ್ನು ಮಾಡುವ ಮತ್ತು ಮಾರ್ಪಡಿಸುವ ಕಾರ್ಯವಾದಂತಾಗುತ್ತದೆ. ಹೀಗೆ ಅಭಿವೃದ್ಧಿ ಕಾರ್ಯಗಳಿಗೆ ಬೇಕಾಗುವ ಮನುಷ್ಯಶಕ್ತಿಯನ್ನು (manpower) ಮತ್ತು ಆಡಳಿತಗಾರರನ್ನು (administrators) ತಯಾರಿಸಿದಂತಾಗಿ ಆಡಳಿತವು ಸುಲಭವಾಗುತ್ತದೆ. ಆರ್ಥಿಕ ದೃಷ್ಟಿಯಿಂದ ಒಕ್ಕಲುತನ ಹುಟ್ಟುವಳಿ ಹೆಚ್ಚಾಗುತ್ತವೆ. ಇದಕ್ಕೆ ಕಾರಣವೆಂದರೆ ಸಮಾಜಾಭಿವೃದ್ಧಿಯೋಜನೆಯು ಭೂಸುಧಾರಣೆ ಕಾಯ್ದೆಯನ್ನು ಬಳಕೆಯಲ್ಲಿ ತಂದಿರುತ್ತದೆ. ಮತ್ತು ಭೂಮಿಯು ಉತ್ಪನ್ನ ಹೆಚ್ಚುವಂತೆ ಸುಧಾರಣಾ ಕಾರ್ಯ ಕೈಕೊಳ್ಳುತ್ತದೆ. ಇದರ ಜೊತೆಗೆ ಪಶುಸಂಗೋಪನ ಕೈಕೊಂಡು ಪಶುಸಂಪತ್ತನ್ನು ಹೆಚ್ಚಿಸುತ್ತದೆ. ಔದ್ಯೋಗಿಕ ರಂಗದಲ್ಲಿ ಹಣ ತೊಡಗಿಸಿ ಗ್ರಾಮಾಂತರಗಳಲ್ಲಿ ಉದ್ಯೋಗ ದಂಧೆಗಳನ್ನು ಹೆಚ್ಚಿಸಿ ಔದ್ಯೋಗಿಕ ವೃದ್ಧಿಯನ್ನು ಮಾಡುತ್ತದೆ. ಇದರಿಂದ ರೈತನ ಆರ್ಥಿಕಪರಿಸ್ಥಿತಿ ಸುಧಾರಿಸುತ್ತದೆ ಮತ್ತು ನಿರುದ್ಯೋಗಿಗಳಾದವರಿಗೆ ಉದ್ಯೋಗ ಸಿಗುತ್ತದೆ. ಇದರಿಂದ ಗಳಿಕೆಯು ಹೆಚ್ಚಾಗಿ ರಾಷ್ಟ್ರದ ಸಂಪನ್ಮೂಲಗಳು ಭದ್ರವಾಗು

ತ್ತವೆ. ಒಟ್ಟಿನಲ್ಲಿ ಅಭಿವೃದ್ಧಿ ಯೋಜನೆಗಳು ಫಲಕಾರಿಯಾಗುವಲ್ಲಿ ಬಹಳ ಸಹಾಯವಾದಂತಾಗುವದು.

೧೯೫೨ ರಲ್ಲಿ ಕಾರ್ಯಕ್ರಮಕ್ಕೆ ಸಂಬಂಧಿಸಿದಂತೆ ನಿಯಮಿಸಲಾಗಿದ್ದ ಅಧಿಕ ಆಹಾರ ಉತ್ಪಾದನೆ ವಿಚಾರಣಾ ಸಮಿತಿಯು ಹಳ್ಳಿಗಳನ್ನು ಯಾವತ್ತೂ ರೀತಿಯಿಂದ ಪುನ-ರ್ಘಟಿಸಬೇಕೆಂದು ಮತ್ತು ಅದರೊಡನೆ ರಾಷ್ಟ್ರೀಯ ವಿಸ್ತರಣ ಅಂದೋಲನವು ಕನಿಷ್ಠ ೭-೮ ವರ್ಷಗಳವರೆಗೆ ಇರಬೇಕೆಂದು ಸಿಫಾರಸು ಮಾಡಿತು. ಇದರ ಪರಿಣಾಮವಾಗಿ ಮೊದಲನೇ ಪಂಚವಾರ್ಷಿಕ ಯೋಜನೆಯಲ್ಲಿ ಸಮಗ್ರ ಸಮಾಜ ವಿಕಾಸ ಯೋಜನೆ ಮತ್ತು ಸಮಾಜ ವಿಸ್ತರಣ ಯೋಜನೆ ಎಂಬವು ಕಾಣಿಸಿಕೊಂಡವು. ಇವೆರಡೂ ಅಂಗಗಳನ್ನೊಳಗೊಂಡ ಕಮ್ಯುನಿಟಿ ಡೆವ್ಹಲಪ್‌ಮೆಂಟ್ ಪ್ರೊಜೆಕ್ಟ ಎಂದು ೨, ಅಕ್ಟೋಬರ ೧೯೫೨ರಲ್ಲಿ ಉದ್ಘಾಟಿಸಲ್ಪಟ್ಟಿತು. ಆರಂಭದಲ್ಲಿ ೫೫ ಪ್ರೊಜೆಕ್ಟ್ಸ ಇದ್ದು ೨೭೩೮೮ ಹಳ್ಳಿಗಳನ್ನು ಒಳಗೊಂಡು ಸುಮಾರು ೧೬-೧೭ ದಶಲಕ್ಷ ಜನರನ್ನು ಆವರಿಸಿತ್ತು. ಈಗ ಮಾತ್ರ ಎಲ್ಲ ಹಳ್ಳಿಗಳು ಈ ಯೋಜನೆಯ ಪ್ರಭಾವಕ್ಕೊಳಗಾಗಿವೆ. ಮೊದಲೇ ನಿಯೋಜಿಸಿದಂತೆ ೧೯೬೩ ಅಕ್ಟೋಬರದ ಕೊನೆಗೆ ಈ ಯೋಜನೆಯು ಸಮಸ್ತ ದೇಶವನ್ನು ಆವರಿಸಿವೆ ಎಂದು ಗೊತ್ತು ಪಡಿಸಲಾಗಿದೆ.

ಅವೇ ಸುರುವಾದಾಗ ಮೊದಲನೆ ಪಂಚವಾರ್ಷಿಕ ಯೋಜನೆಯು 'ಸಮಾಜ ವಿಕಾಸ ಯೋಜನೆಯು' ಒಂದು ಪದ್ಧತಿ (method) ಎಂದು, ರಾಷ್ಟ್ರೀಯ ವಿಸ್ತರಣಾಕ್ರಮವು

ಒಂದು ಕಾರ್ಯವಾಹಕ (agency) ಎಂದು ನಿರ್ಧರಿಸಿತ್ತು. ಇವುಗಳ ಮುಖಾಂತರ ಹಳ್ಳಿಗಳ ಆರ್ಥಿಕ ಮತ್ತು ಸಾಮಾಜಿಕ ಜೀವನಗಳಲ್ಲಿ ಮಾರ್ಪಾಡು ಮಾಡಲು ಯೋಜನೆಗೆ ಅನುಕೂಲ ವಾಗುವದೆಂದು ಕಂಡುಕೊಂಡಿತು. ಅಂತೂ ಮುಖ್ಯವಾಗಿ (ಅ) ಗ್ರಾಮೀಣ ಜನರಲ್ಲಿ ಉದಾತ್ತ ಧ್ಯೇಯಗಳನ್ನು ಹುಟ್ಟಿ ಸುವದು, (ಬ) ಸಹಕಾರಿ ಭಾವನೆಯನ್ನು ಬಿತ್ತುವದು (ಕ) ಹೆಚ್ಚು ಹುಟ್ಟುವಳಿಯಾಗುವಂತೆ ಪ್ರಯತ್ನಿಸುವದು ಮತ್ತು (ಡ) ಬಹಳ ಜನರಿಗೆ ಉದ್ಯೋಗ ದೊರಕಿಸುವಂತೆ ನೋಡಿ ಕೊಳ್ಳುವದು, ಇವೇ ಮುಖ್ಯ ಗುರಿಗಳನ್ನಿಟ್ಟುಕೊಂಡಿದೆ. ಇಂಥ ಧ್ಯೇಯಗಳು ಜನರ ಕಲ್ಯಾಣ ಮತ್ತು ಅಭಿವೃದ್ಧಿ ಗಳನ್ನು ಈಡೇರಿಸುತ್ತವೆ. ಹೀಗೆ ಸಮಾಜ ವಿಕಾಸ ಯೋಜನೆಯು ಹಳ್ಳಿಯ ಜೀವನದ ಯಾವತ್ತೂ ವಿಷಯ ಗಳನ್ನು ಒಳಗೊಂಡ ಹೆಚ್ಚು ವ್ಯಾಪಕವುಳ್ಳ ಯೋಜನೆ ಯೆನ್ನಬಹುದು. ಈ ಉದಾತ್ತ ಧ್ಯೇಯವುಳ್ಳ ಯೋಜನೆಯು ಫಲಕಾರಿಯಾಗಬೇಕಾದರೆ ಜನರ ಸಹಕಾರ ಮತ್ತು ಭಾಗವಹಿ ಸುವ ರೀತಿ ಅವಶ್ಯವೆಂದೂ ಒತ್ತಿ ಹೇಳಲ್ಪಟ್ಟಿತು. ರಾಷ್ಟ್ರದ ಸಂಯುಕ್ತ ಸಂಘದ ಸಮಾಜ ವಿಕಾಸ ಯೋಜನೆ ಮತ್ತು ಆರ್ಥಿಕಾಭಿವೃದ್ಧಿಗಳನ್ನು ಅಭ್ಯಾಸ ಮಾಡಲು ನಿಯಮಿಸಿದ ತಂಡವೂ ಸಹ ಸಮಾಜ ವಿಕಾಸ ಯೋಜನೆಯು ದ್ವಿದಿಶೆ ಯಿಂದ ಪ್ರಯತ್ನಿಸುವ ಮಾದರಿ ಎಂದು ಕಂಡು ಹಿಡಿಯಿತು. ಒಂದುಕಡೆಯಿಂದ ಸರಕಾರವು ಅಭಿವೃದ್ಧಿ ಯೋಜನೆಗಳನ್ನು ನಿರ್ಧರಿಸಿ ಅವುಗಳಿಗೆ ಬೇಕಾಗುವ ಆರ್ಥಿಕ ಮತ್ತು ತಾಂತ್ರಿಕ ಸಹಾಯ ಮಾಡಬೇಕು. ಮತ್ತೊಂದು

ಕಡೆಯಿಂದ ರಾಷ್ಟ್ರೀಯ ಅಭ್ಯುದಯವಾಗಲು ಯಾವತ್ತೂ ಜನರು ಈ ಯೋಜನೆಗೆ ಸಹಕಾರ ನೀಡಬೇಕು. ಶಕ್ಯವಿದ್ದರೆ ತನು-ಮನ-ಧನದಿಂದ ಅದರಲ್ಲಿ ಭಾಗವಹಿಸಬೇಕು. ಜನರಲ್ಲಿ ವಿಚಾರಕ್ರಾಂತಿ ಅಥವಾ ಮನೋಪರಿವರ್ತನೆ ಯಾಗುವಂತೆ ಪ್ರಯತ್ನಿಸಬೇಕು. ಹೀಗೆ ಸಮಾಜ ವಿಕಾಸ ಯೋಜನೆಯು ಸರಕಾರ ಮತ್ತು ಸಾರ್ವಜನಿಕರ ಬೆಂಬಲ ದಿಂದ ಫಲಕಾರಿಯಾಗಲು ಸಾಧ್ಯ. ಆದ್ದರಿಂದ ಇದು ಕೇವಲ ಸರಕಾರದ ಜವಾಬ್ದಾರಿಯೆಂದು ಜನರು ನಿರ್ಲಿಪ್ತರಾಗಿ ಕೂಡ್ರುವಂತಿಲ್ಲ. ಅದರಂತೆ ಇದು ಕೇವಲ ಜನರ ಉದ್ಧಾರ ಕ್ಕಾಗಿ ಮತ್ತು ಹಳ್ಳಿಗಳ ಅಭಿವೃದ್ಧಿಗಾಗಿ ಹೆಣಗುತ್ತದೆ, ಕಾರಣ ಜನರ ಹೊಣೆಗಾರಿಕೆಯೆಂದು ಸರಕಾರವೂ ಸಹಿತ ಸಡಿಲು ಬಿಡುವಂತಿಲ್ಲ. ಸರಕಾರವು ಜನರ ಮನವೊಲಿಸಿ ಜನರ ಸಹಾಯ-ಸಹಕಾರ ಪಡೆಯಬೇಕು. ಜನರು ತಮ್ಮ ಪ್ರಯತ್ನ ಮತ್ತು ಆಕಾಂಕ್ಷೆಗಳಿಂದ ಸರಕಾರದ ಬೆಂಬಲ ಪಡೆದು ಗ್ರಾಮೀಣ ಜೀವನವನ್ನು ರಸಭರಿತವಾಗಿ ಮಾಡಬೇಕು.

ಸಾರಾಂಶವಾಗಿ ಸಮಾಜವಿಕಾಸ ಯೋಜನೆಯ ಮೂಲ ಭೂತ ತತ್ವಗಳು ಕೆಳಗಿನಂತಿವೆ :

(೧) ಸಮಾಜವಿಕಾಸ ಯೋಜನೆಗೆ ಒಳಪಟ್ಟ ಕ್ಷೇತ್ರ ಗಳಲ್ಲಿ, ಗ್ರಾಮಾಭ್ಯುದಯದ ಅಂಗಗಳು ಐಕ್ಯತೆಯಿಂದ ವರ್ತಿಸಬೇಕು. ಯಾವತ್ತೂ ಶಾಖೆಗಳ ಸಮಗ್ರ ಯೋಜನೆಯು ಗುರಿಯೆಂದು ತಿಳಿಯಬೇಕು.

(೨) ಗ್ರಾಮೀಣ ಜನರ ಎಲ್ಲ ತೊಂದರೆಗಳನ್ನು ತಿಳಿಯಲು ಮತ್ತು ಪರಿಹರಿಸಲು ಗ್ರಾಮಸೇವಕನ ಮುಖಾಂತರ ಏಕೀಕೃತ ಪ್ರಯತ್ನ (Co-ordinated approach) ಮಾಡಬೇಕು.

(೩) ಸರಕಾರದ ಪ್ರತಿನಿಧಿಗಳ ಸಹಾಯ ಮತ್ತು ಮಾರ್ಗದರ್ಶನದ ಜೊತೆಗೆ ಜನರಲ್ಲಿಯೂ ಅಭಿವೃದ್ಧಿ ಹೊಂದಬೇಕೆಂಬ ಇಚ್ಛೆ ಬೆಳೆದುಬರಬೇಕು.

(೪) ಗ್ರಾಮಾಂತರಗಳಲ್ಲಿ ಹೇರಳವಾದ ಸಂಪನ್ಮೂಲಗಳನ್ನು ರಚನಾತ್ಮಕ ಕಾರ್ಯಗಳಲ್ಲಿ ಉಪಯೋಗಿಸುವಂತೆ ಸಹಾಯ ಮಾಡಲು ಜನರು ತಮ್ಮ ಕೆಲಸದ ಜೊತೆಗೆ ಅಭಿವೃದ್ಧಿ ಕಾರ್ಯಗಳಲ್ಲಿ ಆಸಕ್ತಿ ತೋರಿಸಬೇಕು.

(೫) ಈ ಯೋಜನೆಯಂಥ ಕೇಂದ್ರೀಕೃತ ಪ್ರಯತ್ನದಲ್ಲಿ, ಜನರು ಸ್ಥಾನಿಕ ಸಂಸ್ಥೆಯ ಮುಖಾಂತರ ತಮ್ಮ ಸಹಾಯ-ಸಹಕಾರಗಳನ್ನು ಒದಗಿಸಬೇಕು. ಅಂದರೇನೇ ಉತ್ತಮ ಪರಿಣಾಮಗಳು ಕಂಡು ಬರುವವು.

(೬) ಗ್ರಾಮೀಣ ಸಮಸ್ಯೆಗಳ ಪರಿಹಾರವು ಹಳ್ಳಿಗಳ ಪರಿಸ್ಥಿತಿಯ ಅನುಭವದ ಮೇಲೆ ಅವಲಂಬಿಸಿರಬೇಕು. ಅಂದರೆ ಅವರಿಗೆ ಗೊತ್ತಿದ್ದ ಸರಳ ಮತ್ತು ಸಾದಾ ಯಂತ್ರೋಪಕರಣದಿಂದ ಮತ್ತು ತಾಂತ್ರಿಕ ಪದ್ಧತಿಯಿಂದ ಪರಿಹಾರ ಕಂಡುಹಿಡಿಯಬೇಕು.

(೭) ಜನರ ಉತ್ಸಾಹವನ್ನು ಹೆಚ್ಚಿಸುವಂಥ ಮುಖ್ಯ ಉದ್ದೇಶವಿರಬೇಕು. ಆ ಉದ್ದೇಶವು ಜನರಲ್ಲಿ ಉತ್ತಮ

ಮತ್ತು ಸುಖದಾಯಕ ಜೀವನವನ್ನು ನಡೆಯಿಸಬೇಕೆಂಬು ದನ್ನು ಸಾರಿ ಹೇಳಬೇಕು.

(ಲ) ಜನಜೀವನದ ಸಮಸ್ತ ಪರಿಹಾರಗಳನ್ನು ಸಹಕಾರ ಭಾವನೆಯಿಂದಲೆ ಬಿಡಿಸಲಿಕ್ಕೆ ಪ್ರಯತ್ನಿಸಬೇಕು.

ಈ ಎಲ್ಲ ತತ್ವಗಳನ್ನೊಳಗೊಂಡ ಯೋಜನೆಯನ್ನು ಕೆಳಗಿನಂತೆ ಕಾರ್ಯರೂಪದಲ್ಲಿ ತರುವ ವ್ಯವಸ್ಥೆಯಾಗಿದೆ.

(ಅ) ಪ್ರತಿಯೊಂದು ಬ್ಲಾಕ್‌ದಲ್ಲಿ, ತಾಲೂಕಿನಲ್ಲಿ ಬ್ಲಾಕು ಮತ್ತು ಹಳ್ಳಿ ಇವೆರಡು ಮುಖ್ಯ ಮಟ್ಟಗಳು. ಇವೇ ಎಲ್ಲ ಕಾರ್ಯಕ್ರಮಗಳನ್ನು ನಿಯೋಜಿಸಲು ಆಧಾರಸ್ತಂಭಗಳು.

(ಬ) ಗ್ರಾಮಪಂಚಾಯತಿ, ಗ್ರಾಮೀಣಸಹಕಾರಿಸಂಘ, ಹಳ್ಳಿಯ ಶಾಲೆ ಮತ್ತು ಇಂಥ ಯಾವುದೇ ಘಟಕವು ತಾಲೂ ಕಿನ ಮಟ್ಟದಲ್ಲಿದ್ದರೂ ಬ್ಲಾಕಿಗೆ ಪೂರಕಗಳಾಗಿರುತ್ತವೆ.

(ಕ) ಬಜೆಟ್ಟಿನಲ್ಲಿದ್ದ ಅಭಿವೃದ್ಧಿಕಾರ್ಯಗಳು ಮತ್ತು ಯಾವುದೇ ಸರಕಾರದ ಖಾತೆಯಿಂದ ತೆಗೆದುಕೊಂಡ ಕಾರ್ಯ ಕ್ರಮಗಳು ಒಂದೇ ಯೋಜನೆಯ ಮುಖ್ಯಾಂಶಗಳು ಎಂದು ತಿಳಿಯಬೇಕು.

(ಡ) ಗ್ರಾಮೀಣ ಜನರ ದುಡಿಮೆ, ಹಣದ ಸಹಾಯ ಮತ್ತು ಅವರು ಭಾಗವಹಿಸುವ ಶಕ್ತಿ ಮುಂತಾದವುಗಳನ್ನು ಕಲೆ ಹಾಕುವಂಥ ಕಾರ್ಯಕ್ರಮಗಳಿಗೆ ಪ್ರಾಧಾನ್ಯವೀಯಬೇಕು.

ಎಲ್ಲ ಕಾರ್ಯಕ್ರಮಗಳನ್ನು ಬ್ಲಾಕ್ ಮಟ್ಟದಲ್ಲಿ ಸಂಯೋಜಿಸಿ ಕಾರ್ಯರೂಪಕ್ಕೆ ತರುತ್ತಾರೆ. ಬ್ಲಾಕುಗಳು ಯೋಜನೆಯ ಅಭಿವೃದ್ಧಿಯ ಘಟಕವೆಂದು ಪರಿಗಣಿಸಲ್ಪಡ

ಬೇಕು. ಅಂತೂ ಸಂಕ್ಷಿಪ್ತವಾಗಿ ಸಮಾಜ ವಿಕಾಸ ಯೋಜನೆಯ ಮೂರು ಗುಣಗಳನ್ನು ಇಲ್ಲಿ ಕಾಣಿಸಬಹುದು. (೧) ವಿಸ್ತರಣಾ ಕಾರ್ಯವನ್ನು ಕೈಕೊಳ್ಳುವದು. ಅಂದರೆ ರೈತರಿಗೆ ಬೇಕಾಗುವ ಸುಧಾರಿಸಿದ ಬೀಜ, ಗೊಬ್ಬರ ಮತ್ತು ಎತ್ತು ಮುಂತಾದವುಗಳನ್ನು ಕೊಳ್ಳಲಿಕ್ಕೆ ಸಾಲ ಕೊಡುವದು; ಸಾಧ್ಯವಿದ್ದರೆ ಅವುಗಳನ್ನೇ ಪೂರೈಸುವದು. ಅವುಗಳ ಉಪಯೋಗಕ್ಕಾಗಿ ಬೇಕಾಗುವ ಸಲಹೆ (ತಾಂತ್ರಿಕ ಸಲಹೆ) ನೀಡುವದು. (೨) ಹಳ್ಳಿಗಳಲ್ಲಿ ಸಹಕಾರಿ ಸಂಸ್ಥೆಗಳನ್ನು ಪ್ರೋತ್ಸಾಹಿಸುವದು ಮತ್ತು ಹೊಸ ಸಂಸ್ಥೆಗಳನ್ನು ತೆರೆಯುವದು. ಇವುಗಳ ಮುಖಾಂತರ ಸಹಾಯ ಮತ್ತು ಸಲಹೆ ಕೊಡಬಹುದು. (೩) ಹಳ್ಳಿಗಳ ಅಭಿವೃದ್ಧಿಗಾಗಿ ಮಾಡಬೇಕಾದ ಯೋಜನಾಕ್ರಮಗಳನ್ನು ಗೊತ್ತುಪಡಿಸುವುದು ಮತ್ತು ಕಾರ್ಯರೂಪದಲ್ಲಿ ತರುವದು. ಈ ಮೇಲಿನ ಮೂರು ಭಾಗಗಳು ಚನ್ನಾಗಿ ಹೊಂದಿಕೊಳ್ಳಬೇಕು.

ಅನೇಕ ಹೊಣೆಗಾರಿಕೆಗಳನ್ನು ಕಾರ್ಯರೂಪಕ್ಕಿಳಿಸಲು ವಿಸ್ತರಣಾಧಿಕಾರಿಗಳು ಬ್ಲಾಕ್ ಡೆವಲಪ್‌ಮೆಂಟ ಆಫೀಸರರ ಕೆಳಗೆ ಕೆಲಸ ಮಾಡುತ್ತಾರೆ. ಸುಮಾರು ೯ ರಿಂದ ೧೧ ಜನ ಅಭಿವೃದ್ಧಿ ಅಧಿಕಾರಿಗಳು ಇರುತ್ತಾರೆ. ಒಕ್ಕಲುತನದ ಸಲುವಾಗಿ ಒಬ್ಬರು, ಉದ್ದಿಮೆಗಳ ಸಲುವಾಗಿ ಒಬ್ಬರು, ಸಹಕಾರದ ಸಲುವಾಗಿ ಒಬ್ಬರು, ಶಿಕ್ಷಣದ ಸಲುವಾಗಿ ಒಬ್ಬರು, ಪಶುಸಂಗೋಪನದ ಸಲುವಾಗಿ ಒಬ್ಬರು, ತಾಂತ್ರಿಕ ಮಾಹಿತಿ ಸಲುವಾಗಿ ಒಬ್ಬರು– ಹಾಗೂ ಹಳ್ಳಿಯ ಕಟ್ಟಡ,

ಸೇತುವೆ ನಿರ್ಮಾಣಕ್ಕೆ ಹಳ್ಳಿಗಳ ಎಂಜಿನೀಯರಿಂಗ ವಿಸ್ತರಣಾಧಿಕಾರಿಗಳು ಒಬ್ಬರು ಹೀಗೆ ವಿಸ್ತರಣಾಧಿಕಾರಿಗಳು ಇರುತ್ತಾರೆ. ಈ ಎಲ್ಲ ಅಧಿಕಾರಿಗಳ ಸಲಹೆ-ಸೂಚನೆಗಳ ಪ್ರಕಾರ ಹಳ್ಳಿಯಲ್ಲಿ ಕೆಲಸ ಮಾಡುವವನಿಗೆ ಗ್ರಾಮಸೇವಕನೆನ್ನುವರು. ಗ್ರಾಮಸೇವಕರ ಕಾರ್ಯ ಜನರ ಬೆಂಬಲವನ್ನು ಪಡೆಯುವದು, ಅವರಿಗೆ ಯೋಜನೆಯ ಗೊತ್ತುಗುರಿಗಳನ್ನು ಸಾದರ ಪಡಿಸುವದು, ಅವರಲ್ಲಿ ಹುರುಪು ಹುಮ್ಮಸ್ಸನ್ನು ಹುಟ್ಟಿಸುವದು ಮತ್ತು ಸ್ಥಾನಿಕ ಸಂಸ್ಥೆಗಳ ಕೂಡ ಸಹಕರಿಸುವದು. ಹಳ್ಳಿಗರಿಗೆ ಬೇಕಾದ ಸವಲತ್ತುಗಳನ್ನು ಆತನು ಮೇಲಾಧಿಕಾರಿಗಳಿಗೆ ತಿಳಿಸಿ ಪಡೆಯಬಹುದು. ಒಟ್ಟು ಸರಕಾರ ಮತ್ತು ಜನರ ಮಧ್ಯಸ್ತಿಕೆ ವಹಿಸಿ ಕೆಲಸ ಮಾಡುವವನು ಗ್ರಾಮಸೇವಕನು. ಅವರಲ್ಲಿ **ಸೇವೆಯೇ ಮುಖ್ಯ ಗುರಿ,** ಅಧಿಕಾರವಲ್ಲ.

ಎಲ್ಲ ಅಭಿವೃದ್ಧಿ ಕಾರ್ಯಗಳನ್ನು ಸಮಾಜ ವಿಕಾಸ ಯೋಜನೆಯು ಎರಡು ಹಂತಗಳಲ್ಲಿ ವಿಂಗಡಿಸಬಹುದು. ೧೯೫೮ರ ಮೊದಲು ಮೂರು ಹಂತಗಳಿದ್ದವು. ಆದರೆ ಮೆಹತಾ ಕಮೀಟಿಯು ಸಿಫಾರಸಿನ ಮೇರೆಗೆ ಈಗ ಎರಡೇ ಹಂತಗಳು : (೧) ಮೊದಲನೇ ಹಂತದಲ್ಲಿ ಈ ಎಲ್ಲ ಕಾರ್ಯಕ್ರಮಗಳಿಗೆ ೧೨ ಲಕ್ಷ ರೂಪಾಯಿ ಖರ್ಚು ಮಾಡಬೇಕು ಎಂದು ಅಂದಾಜು ಮಾಡಲಾಗಿದೆ. (೨) ಎರಡನೇ ಹಂತದಲ್ಲಿ ಸುಮಾರು ೫ ಲಕ್ಷ ರೂಪಾಯಿ ಖರ್ಚಾಗುವದು. ಇಷ್ಟು ಹಣವನ್ನು ಪ್ರತಿಯೊಂದು ಬ್ಲಾಕಿಗೆ ಹಂಚಲಾಗುವದು. ಆದರೂ ೧ನೇ ಹಂತದಲ್ಲಿ ಮೊದಲನೇ ವರ್ಷವನ್ನು ಪೂರ್ವ

ವಿಸ್ತರಣೆ ಹಂತ ಎಂದು ಕೃಷಿ ಉದ್ಧಾರಕ್ಕೆ ಅವಶ್ಯವೆನಿಸಿದರೆ ಉಪಯೋಗಿಸಬಹುದೆಂದು ರಾಷ್ಟ್ರೀಯ ಅಭಿವೃದ್ಧಿ ಮಂಡಳಿಯೂ ಒಪ್ಪಿರುವದು.

ಈ ಎಲ್ಲ ಕಾರ್ಯಕ್ರಮಗಳನ್ನು ನೆರವೇರಿಸಲು ಬೇಕಾಗುವ ಸಿಬ್ಬಂದಿಯನ್ನು ತರಬೇತಿ ಮಾಡಲು ಶಿಕ್ಷಣ ಕೇಂದ್ರಗಳು ತೆರೆಯಲ್ಪಟ್ಟಿವೆ. ಸೆಂಟ್ರಲ್ ಇನ್‌ಸ್ಟಿಟ್ಯೂಟ್ ಆಫ್ ಸ್ಟಡಿ ಆ್ಯಂಡ ರಿಸರ್ಚ್ ಡೆವಲಪ್‌ಮೆಂಟ್ ಎಂಬದನ್ನು ಹೈದರಾಬಾದಿನಲ್ಲಿ ತೆರೆಯಲಾಗಿದೆ. ಇದಲ್ಲದೆ ಗ್ರಾಮಸೇವಕರ ತರಬೇತಿಗೆ ಅನೇಕ ಕೇಂದ್ರಗಳನ್ನು ಪ್ರತಿಯೊಂದು ಪ್ರಾಂತದಲ್ಲಿ ತೆರೆಯಲಾಗಿದೆ.

ಈ ಯೋಜನೆಗೆ (C. D. P.) ಮೊದಲನೇ ಪಂಚವಾರ್ಷಿಕ ಯೋಜನೆಯಲ್ಲಿ ೪೬.೭ ಕೋಟಿ ರೂಪಾಯಿಗಳನ್ನು, ೨ನೇ ಯೋಜನೆಯಲ್ಲಿ ೧೮೯ ಕೋಟಿ ರೂಪಾಗಳನ್ನು ಮತ್ತು ೩ನೇ ಯೋಜನೆಯಲ್ಲಿ ೨೯೨ ಕೋಟಿ ರೂಪಾಯಿಗಳನ್ನು ಖರ್ಚು ಮಾಡಲಾಗಿದೆ. ೪ನೇ ಪಂಚವಾರ್ಷಿಕ ಯೋಜನೆಯಲ್ಲಿ C. D. P. ಮತ್ತು ಪಂಚಾಯತಿಗಳ ಅಭಿವೃದ್ಧಿಗಾಗಿ ಒಟ್ಟು ೨೬೦ ಕೋಟಿ ರೂಪಾಯಿಗಳನ್ನು ತೆಗೆದಿಡಬೇಕೆಂದು ಗೊತ್ತು ಮಾಡಲಾಗಿದೆ.

ಸಮಾಜ ವಿಕಾಸ ಯೋಜನೆಯ ಸಫಲತೆಯ ಬಗ್ಗೆ ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಪಬ್ಲಿಕ್ ಓಪಿನಿಯನ್ ಕಲೆಹಾಕಿದ ಮಾಹಿತಿಯನ್ನು ಇಲ್ಲಿ ಉಪಯೋಗಿಸಬಹುದು. (೧) ಸಮಾಜವಿಕಾಸ ಯೋಜನೆಯಿಂದ ಜನರು ಲಾಭಹೊಂದಿದ್ದಾರೆಯೇ ಎಂಬ ಪ್ರಶ್ನೆಗೆ ಕೇವಲ ನೂರಕ್ಕೆ ಆರು ಜನರು

'ಆಗಿದೆ' ಎಂದು ಉತ್ತರಿಸಿದ್ದಾರೆ. ನೂರಕ್ಕೆ ೬೨ ಜನರು ಈ ಯೋಜನೆಯಿಂದ 'ಸಾಧಾರಣ ಅನುಕೂಲ'ವಾಗಿದೆ ಎಂದು ಮತ್ತು ನೂರರಲ್ಲಿ ೨೩ ಜನರು 'ಯಾವ ಲಾಭವೂ ಆಗಿಲ್ಲ'ವೆಂದು ಅಂದರು. ಫಲಕಾರಿಯಾಗಿಲ್ಲವೆನ್ನಲಿಕ್ಕೆ ಕಾರಣಗಳೇನಂದರೆ (ಅ) ಜನರೊಡನೆ ಅಧಿಕಾರಿಗಳ ಸಂಪರ್ಕ ಕಡಿಮೆ, (ಬ) ಸರಕಾರಿ ನೌಕರರಲ್ಲಿ ಕಚೇರಿಯ ಮನೋಭಾವನೆ ಇದೆ. ಇವುಗಳಿಂದ ಆಡಳಿತದಲ್ಲಿ ಶಿಥಿಲತೆ ಉಂಟಾಗಿದೆ ಎಂದು ನೂರಕ್ಕೆ ೨೬ ಜನರು ಒಪ್ಪಿರುವರು. ನೂರರಲ್ಲಿ ೧೮ ಜನರು ಸಹ ದ್ವೇಷಪೂರಿತ ಆಡಳಿತವು ಮತ್ತು ಕಾರ್ಯಾಚರಣೆಯು ಕಾರಣವೆಂದರು.

ಈ ಮುಖ್ಯಾಂಶಗಳಿಂದ, ಸಮಾಜವಿಕಾಸಯೋಜನೆಯಿಂದ ಸ್ವಲ್ಪ ಬದಲಾವಣೆ ನಡೆದಿದೆ. ಜನರು ಉತ್ಸಾಹ ತೋರಿಸಲು ತೊಡಗಿದ್ದಾರೆ. ಸರಕಾರಿ ಅಧಿಕಾರಿಗಳು ಜನರೊಡನೆ ಸಂಪರ್ಕಬೆಳೆಸಿದರೆ ಯೋಜನೆಯಿಂದ ಹೆಚ್ಚು ಪ್ರಯೋಜನವಾಗುವದೆಂದು ಊಹಿಸಬಹುದು.

(೨) ಸಮಾಜವಿಕಾಸ ಯೋಜನೆಯ ಫಲವು ಕೇವಲ ಕೆಲ ಜನರಿಗೆ ತಪ್ಪಿವೆ ಎಂದು ನೂರಕ್ಕೆ ೭೭ ಜನರು ಅಭಿಪ್ರಾಯವಿತ್ತರು. ಅವರಲ್ಲಿಯೂ ಶ್ರೀಮಂತರು ಬಹಳ ಲಾಭ ಪಡೆದುಕೊಂಡಿರುವರು ಎಂದು ನೂರಕ್ಕೆ ೫೭ ರಷ್ಟು ಜನರು ಅಭಿಪ್ರಾಯಪಟ್ಟರು. ಇವರ ಜೊತೆಗೆ ಪಂಚಾಯತಿ ರಾಜ್ಯದ ಕಾರ್ಯಕಾರಿ ಮಂಡಲದವರೂ ಲಾಭ ಪಡೆದರು ಎಂದು ನೂರಕ್ಕೆ ೪೩ ರಷ್ಟು ಜನರು ಅಭಿಪ್ರಾಯ ಕೊಟ್ಟರು. ಅಶಿಕ್ಷಿತರು ಮತ್ತು ಅಜ್ಞಾನಿಗಳು ಈ ಯೋಜನೆಯಿಂದ

ಲಾಭ ಪಡೆದಿಲ್ಲವೆಂದು ನೂರಕ್ಕೆ ೪೫ ರಷ್ಟು ಜನರು ಒಪ್ಪಿರು ವರು. ಅಂತೂ ಈ ಯೋಜನೆಯ ಲಾಭವು ಆರ್ಥಿಕ ದೃಷ್ಟಿಯಿಂದ ಬಲವಾಗಿದ್ದವರಿಗೆ ಆಗಿದೆ ಎಂದು ನೂರಕ್ಕೆ ೭೦ ರಷ್ಟು ಸಂದರ್ಶಿತರು ಅಭಿಪ್ರಾಯವಿತ್ತರು.

(೩) ಆಹಾರೋತ್ಪಾದನೆಯ ಬಗ್ಗೆ ಸಮಾಜವಿಕಾಸ ಯೋಜನೆಯು ಫಲಕಾರಿಯಾಗಿಲ್ಲವೆಂದು ಕಂಡುಬಂದಿದೆ. ಬಹಳ ಜನರು ಸಮಾಜವಿಕಾಸಯೋಜನೆಯ ಹೊರಗಿನ (external factors) ಘಟಕಗಳು ಇದಕ್ಕೆ ಕಾರಣವೆಂದರು. ಸುಮಾರು ೯ ಸಂದರ್ಶಿತರು ಆಹಾರೋತ್ಪಾದನೆಯಲ್ಲಿ ಯಾವ ಮುನ್ನಡೆ ತೋರಿಸದೆ ಇರುವದು ಈ ಯೋಜನೆಯ ಮುಖ್ಯ ಕುಂದೆಂದರು.

(೪) ಅಂತೂ ಕೊನೆಗೆ, ನೂರಕ್ಕೆ ೬೦ ಜನರು ಈ ಯೋಜನೆಯು ಉತ್ತಮ ಫಲಕೊಡುವಂತೆ ಇನ್ನಷ್ಟು ಬಲಾಢ್ಯ ವಾಗಬೇಕು ಮತ್ತು ಕೆಲ ಸುಧಾರಣೆಗಳನ್ನು ಇದರಲ್ಲಿ ಮಾಡ ಬೇಕು ಎಂದರು. ಬ್ಲಾಕ್ ಡೆವಲಪ್ ಮೆಂಟ್ ಆಫೀಸರರ ಅವಶ್ಯ ಕತೆಯ ಬಗ್ಗೆ, ನೂರರಲ್ಲಿ ೪೦ ಜನರು B. D. O. ಇರ ಲೆಂದರು. ಮತ್ತೆ ಸುಮಾರು ೩೫ ಜನರು ಅವರನ್ನು ತೆಗೆಯಬೇಕೆಂದು ಅಭಿಪ್ರಾಯಪಟ್ಟರು.

———

## ೫. ಸಮಾರೋಪ

ಆರ್ಥಿಕಾಭಿವೃದ್ಧಿಯು ಹೊಸ ಸಂಸ್ಥೆಗಳನ್ನು ಕಟ್ಟುತ್ತದೆ ಮತ್ತು ಇದ್ದವುಗಳನ್ನು ಸುಧಾರಿಸುತ್ತದೆ. ಹಿಂದುಳಿದ ರಾಷ್ಟ್ರಗಳಲ್ಲಿ ಈ ಸಂಘ-ಸಂಸ್ಥೆಗಳು ಒಳ್ಳೆ ಮಹತ್ವದ ಪಾತ್ರವನ್ನು ವಹಿಸುತ್ತವೆ. ಈಗಾಗಲೆ ನೋಡಿದಂತೆ ಸಮಾಜ ವಿಕಾಸಯೋಜನೆಯು ತನ್ನ ಉಪಾಂಗಗಳಾದ ಸಹಕಾರಿ ಸಂಸ್ಥೆ ಮತ್ತು ಪಂಚಾಯತಿ ರಾಜ್ಯಗಳ ಮುಖಾಂತರ ಕಾರ್ಯರೂಪದಲ್ಲಿ ಬರುತ್ತದೆ. ಈ ಯೋಜನೆಯನ್ವಯ ಸಹಕಾರಿ ಸಂಘಗಳನ್ನು ಸುಧಾರಿಸಿ ಭದ್ರ ಮಾಡುವ ಕಾರ್ಯ ಭರದಿಂದ ನಡೆದಿವೆ, ಮತ್ತು ಹೊಸದಾಗಿ ಬಂದ ಪಂಚಾಯತಿ ರಾಜ್ಯವೂ ಅನೇಕ ದಿಶೆಗಳಲ್ಲಿ ವಿಸ್ತರಿಸುತ್ತಿದೆ. ಒಟ್ಟಿನಲ್ಲಿ ಸಮಾಜ ವಿಕಾಸ ಯೋಜನೆಯು ಭಾರತದಲ್ಲಿ ವಿಶಿಷ್ಟ ಕ್ರಾಂತಿಯನ್ನು ಎಬ್ಬಿಸಿ ರಾಜಕೀಯ, ಆರ್ಥಿಕ ಮತ್ತು ಸಾಮಾಜಿಕ ಅಭಿವೃದ್ಧಿಯನ್ನು ಮಾಡಲು ಪ್ರಯತ್ನಿಸುತ್ತಿದೆ. ಆಯಾ ಪಂಚವಾರ್ಷಿಕ ಯೋಜನೆಗಳೂ ಈ ಕಾರ್ಯಕ್ರಮಕ್ಕೆ ಪ್ರಾಮುಖ್ಯವನ್ನು ಕೊಟ್ಟು ಮುಂದೆ ನಡೆದಿವೆ. ಆದರೂ ಈ ಗ್ರಾಮಾಭ್ಯುದಯದ ಯೋಜನಾಂಗಳು ಇನ್ನೂ ಪರಿಣಾಮಕಾರಿಯಾಗಿ, ಫಲಕಾರಿಯಾಗಿ, ಜನಪ್ರಿಯವಾಗಿ, ರಾಷ್ಟ್ರಕ್ಕೆ ಹಿತಕರವಾಗಿ ಬೆಳೆಯಬೇಕಾದರೆ ಕೆಳಗಿನ ಕೆಲ ಸೂಚನೆಗಳನ್ನು ಗಮನದಲ್ಲಿಡಬೇಕು.

(೧) ಸಹಕಾರಿ ಸಂಘಗಳಿಗೆ, ಪಂಚಾಯತಿ ರಾಜ್ಯಗಳಿಗೆ ಆಯ್ಕೆ ಹೊಂದಿದವರು, ಸಾಂಘಿಕ ಮತ್ತು ಸಾಮಾಜಿಕ ತತ್ವಗಳನ್ನು ಪ್ರಾಧಾನ್ಯಮಾಡಿ ತಮ್ಮ ವೈಯಕ್ತಿಕ ಹಿತಗಳನ್ನು ಅಲಕ್ಷಿಸಬೇಕು.

(೨) ಸಮಾಜದಲ್ಲಿ ಪರಕೀಯರ ಆಳಿಕೆಯ ಪ್ರಭಾವದಿಂದ ಬೇರೂರಿದ ವರ್ಗ ಮತ್ತು ಈಗ ಪ್ರಜಾಸತ್ತೆಯ ಕಾಲದಲ್ಲಿ ಬೆಳೆದು ಬರುತ್ತಿರುವ ವರ್ಗ ಇವುಗಳಲ್ಲಿ ಮತಭೇದಗಳು ನಡೆದಿವೆ. ಈ ಎರಡು ವರ್ಗಗಳಲ್ಲಿ ಜೋಡಣೆ ಇಲ್ಲದಿದ್ದರೆ ಅಭಿವೃದ್ಧಿ ಯೋಜನೆಗಳು ಫಲಕಾರಿಯಾಗುವದಿಲ್ಲ.

(೩) ಸರ್ವದಿಶೆಯಲ್ಲಿ ಅಭಿವೃದ್ಧಿಯನ್ನು ಇಚ್ಛಿಸುವ ಯೋಜನೆಯಲ್ಲಿ ಎಲ್ಲ ಉಪಾಂಗಗಳ ಪರಸ್ಪರ ಹೊಂದಾಣಿಕೆ (coordination) ಅಷ್ಟು ಉತ್ತಮ ರೀತಿಯಿಂದ ಆಗಿಲ್ಲ. ಅಲ್ಲದೆ ಕಾರ್ಯ ಮತ್ತು ಕ್ಷೇತ್ರಗಳ ಸರಿಯಾದ ವಿಭಜನೆ ಪರಸ್ಪರ ಅಂಗಗಳ ಮಧ್ಯೆ ಕಂಡು ಬರುವದಿಲ್ಲ. ಆದ್ದರಿಂದ ಪ್ರತಿಯೊಂದು ಅಂಗವು ತನ್ನ ನಿಜವಾದ ಪಾತ್ರ ಮತ್ತು ಪರಿಮಿತಿ ಎಷ್ಟೆಂದು ಕಂಡುಕೊಳ್ಳಲು ಸಾಧ್ಯವಾಗಿಲ್ಲ. ಈ ಯೋಜನೆಯಲ್ಲಿ ಅನೇಕ ಕುಂದುಕೊರತೆಗಳುಂಟು.

(೪) ಒಟ್ಟಾರೆ ನೋಡಿದರೆ, ಆಡಳಿತದಲ್ಲಿಯ ಜಾಡ್ಯ ಮತ್ತು ಅತೃಪ್ತಿಕರ ಸಿಬ್ಬಂದಿಯಿಂದ ಯೋಜನೆಯು ಅನೇಕ ಆಶೆಗಳನ್ನು ಈಡೇರಿಸಿಲ್ಲವೆನ್ನಬಹುದು. ಹೇಗಂದರೆ, ಮೊದಲನೇ ಪಂಚವಾರ್ಷಿಕ ಯೋಜನೆಯಲ್ಲಿ ಸಮಾಜ ವಿಕಾಸ ಯೋಜನೆಗೆ ತೆಗೆದಿಟ್ಟ ೯೭.೫ ಕೋಟಿ ರೂಪಾಯಿಗಳಲ್ಲಿ

ಕೇವಲ ೪೬.೭ ಕೋಟಿ ರೂಪಾಯಿಗಳನ್ನು ಖರ್ಚು ಮಾಡಲಾಯಿತು. ೨ನೇ ಯೋಜನೆಯಲ್ಲಿಯು ೨೦೧.೩ ಕೋಟಿ ರೂಪಾಯಿಗಳಲ್ಲಿ ೧೮೯ ಕೋಟಿ ರೂಪಾಯಿಗಳನ್ನು ಮಾತ್ರ ಬಳಸಲಾಯಿತು. ಮೂರನೇ ಪಂಚವಾರ್ಷಿಕ ಯೋಜನೆಯಲ್ಲಿ ತೆಗೆದಿಟ್ಟ ೩೨೨.೫ ಕೋಟಿ ರೂಪಾಯಿಗಳಲ್ಲಿ ಕೇವಲ ೨೯೨ ಕೋಟಿ ರೂಪಾಯಿಗಳನ್ನು ಉಪಯೋಗಿಸಲಾಗಿದೆ ಎಂದು ತಿಳಿದು ಬಂದಿದೆ. ತೆಗೆದಿಟ್ಟ ಮತ್ತು ಬಳಸಲಾದ ಹಣದಲ್ಲಿಯ ಅಂತರವು ಆಡಳಿತದ ಕಾರ್ಯಾಚರಣೆಯಲ್ಲಿಯ (implementation) ಶಿಥಿಲತೆಯನ್ನು ಸೂಚಿಸುತ್ತಿದೆ ಎನ್ನಬಹುದು.

---

೨೧. ಸಮಾಜಕಾರ್ಯ — ಎಚ್. ಎಂ. ಮರುಳಸಿದ್ಧಯ್ಯ

೨೨. ಸಂಸತ್ತಿನ ಕಾರ್ಯಪದ್ಧತಿ — ಎ. ಎಂ. ರಾಜಶೇಖರಯ್ಯ

೨೩. ಕನ್ನಡ ನಾಡಿನ ಶಾಸನಗಳು — ಪಿ. ಬಿ. ದೇಸಾಯಿ

೨೪. ಕವೀಂದ್ರ ರವೀಂದ್ರರು (ಎರಡನೆಯ ಆವೃತ್ತಿ) — ಎಸ್. ಎಸ್. ಮಾಳವಾಡ

೨೫. ನಾಗಾನಂದ (ಎ. ಆ.) — ಎಚ್. ಪಿ. ಮಲ್ಲೇದೇವರು

೨೬. ಜೀವನದಲ್ಲಿ ನಗೆ (೨ನೇ ಆವೃತ್ತಿ) — ಎಂ. ಎಸ್. ಸುಂಕಾಪುರ

೨೭. ಬಸವಣ್ಣನವರ ಯೋಜನೆಗಳು — ಬಿ. ಸಿ. ಜವಳಿ

೨೮. ೧೮೫೭ರ ಕ್ರಾಂತಿ — ಸಿ. ವೀರಬಸಣ್ಣ

೨೯. ಕನ್ನಡ ಕಥಾಸೃಷ್ಟಿ — ಬಿ. ಬಿ. ಮಹೀಶವಾಡಿ

೩೦. ಸಂಸ್ಕೃತ ಸಾಹಿತ್ಯದಲ್ಲಿ ಶೃಂಗಾರರಸ — ಕೆ. ಕೃಷ್ಣಮೂರ್ತಿ

೩೧. ನೀರಾವರಿ ಬೇಸಾಯ — ಎಸ್. ಎ. ಹೊಸಮನಿ

೩೨. ಸಾರ್ವಜನಿಕ ಅಭಿಪ್ರಾಯ — ಎನ್. ರಾಜಗೋಪಾಲರಾವ್

೩೩. ಕನ್ನಡ ಕಾವ್ಯಗಳಲ್ಲಿ ಕಿರಾತಾರ್ಜುನ ಪ್ರಸಂಗ — ದೇವೇಂದ್ರಕುಮಾರ ಹಕಾರಿ

೩೪. ಕನ್ನಡಕ್ಕೆ ಪುರಂದರದಾಸರು ನೀಡಿದ ಕೊಡುಗೆ — ಜಿ. ಡಿ. ನಾಡಕರ್ಣಿ

೩೫. ಫ್ಯಾಶನ್ನುಗಳು — ಕೆ. ಡಿ. ತಂಗೋಡ

೩೬. ಮಹಾಕವಿ ರಾಘವಾಂಕನ ಪಾತ್ರಗಳಲ್ಲಿ ತತ್ವನಿಷ್ಠೆ — ಬಿ. ವ್ಹಿ. ಮಲ್ಲಾಪುರ

೩೭. ಅಭಿವೃದ್ಧಿ ಯೋಜನೆಗಳಲ್ಲಿ ಸಹಕಾರದ ಪಾತ್ರ — ಎಸ್. ಜಿ. ಕರಭಂಟನಾಳ

೩೮. ಕನ್ನಡ ಜೈನ ಪುರಾಣಗಳು — ಸದಾನಂದ ನಾಯಕ

೩೯. ಕನ್ನಡ ನಾಟ್ಯಸೃಷ್ಟಿ — ಎಚ್. ಜಿ. ಲೋಕೂರ

೪೦. ಹರಿಹರನು ಚಿತ್ರಿಸಿದ ಶಿವಶರಣೆಯರು — ಬಿ. ಬಿ. ಹೆಂಡಿ

೪೧. ನೀವು ಬಯಸುವ ಮಗು ಗಂಡೊ ? ಹೆಣ್ಣೊ ? — ಕೆ. ಆರ್. ರಾಮಸ್ವಾಮಿ

೪೨. ಆಂಡಯ್ಯ — ಬಿ. ಎಸ್. ಕುಲಕರ್ಣಿ

೪೩. ಬೆಳವಲ ನಾಡಿನ ಬೆಳೆಗಳು — ಎಸ್. ಎ. ಹೊಸಮನಿ

೪೪. ಜಾನಪದ ಕಥೆಗಳು — ಎಲ್. ಆರ್. ಹೆಗಡೆ

೪೫. ಸುಧಾರಿಸಿದ ಬೇಸಾಯ — ಎ. ಸಿ. ಕಲ್ಯಾಣಿಮಠ

| | | |
|---|---|---|
| ೪೬. | ಕನ್ನಡನಾಡಿನ ಐತಿಹಾಸಿಕ ಮಹಾಪುರುಷರು | ಬಿ. ಆರ್. ಗೋಪಾಲ |
| ೪೭. | ಗ್ರಂಥಾಲಯದ ಅಂತರಂಗ | ಎಸ್. ಆರ್. ಗುಂಜಾಳ |
| ೪೮. | ಸ್ತ್ರೀ ಮತ್ತು ಶಿಕ್ಷಣ | ವನಮಾಲಾ ಆಚಾರ್ |
| ೪೯. | ಜಾಗತಿಕ ಸರಕಾರ | ಸಿ. ವೀರಬಸಣ್ಣ |
| ೫೦. | ಸಮುದಾಯ ಸಂಘಟನೆ | ಎಚ್. ಎಂ. ಮರುಳಸಿದ್ಧಯ್ಯ |
| ೫೧. | ಅಶೋಕನ ಧರ್ಮಶಾಸನಗಳು | ಎಸ್. ಎಚ್. ರಿತ್ತಿ |
| ೫೨. | ಪ್ರಾಚೀನ ಭಾರತದ ರಾಜ್ಯಪದ್ಧತಿ | ಸಿ. ವ್ಹಿ. ರಂಗಸ್ವಾಮಿ |
| ೫೩. | ಅಕ್ಕಮಹಾದೇವಿ ಮತ್ತು ಮೀರಾಬಾಯಿ | ಎಸ್.ಎಸ್.ಕಬ್ಬಿನ |
| ೫೪. | ಕನ್ನಡ ಕಾವ್ಯದಲ್ಲಿ ವೀರರಸ ನಿರೂಪಣೆ | ಬಿ.ಬಿ.ಮಹೀಶವಾಡಿ |
| ೫೫. | ಹರಿಹರ ಮಹಾಕವಿಯ ಕೆಲವು ಮಹೋನ್ನತ ವಿಚಾರಗಳು | ಬಿ. ಸಿ. ಜವಳಿ |
| ೫೬. | ಭಾರತ ರಾಜ್ಯಘಟನೆ | ಎಂ. ಎಸ್. ಪಾಟೀಲ |
| ೫೭. | ಪಂಚಾಯತಿ ರಾಜ್ಯ | ಎಸ್.ಜಿ. ಕರಭಂಟನಾಳ ಕೆ.ಡಿ. ಬಸವ |
| ೫೮. | ವಿಷಮಜ್ವರ | ಪಿ. ಎಸ್. ಶಂಕರ್ |
| ೫೯. | ಪುಸ್ತಕಭಾಂಡಾರ ಕಾಯುದೆ | ಜಿ. ಎಂ. ಪಾಟೀಲ |
| ೬೦. | ಸರ್ ಐಸಾಕ್ ನ್ಯೂಟನ್ | ಆರ್. ವ್ಹಿ. ಅಬ್ಬಿಗೇರಿ |